KA / BG-GPO / 2515 / WPP-47 / 2009-2011

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೫ | ಬೆಂಗಳೂರು, ಗುರುವಾರ, ಏಪ್ರಿಲ್ ೧, ೨೦೧೦ (ಚೈತ್ರ ೧೧, ಶಕ ವರ್ಷ ೧೯೩೨) | ಸಂಚಿಕೆ ೧೩ |
|---|---|---|


## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಶ್ರೀ ಸಿರಸಗಿ ನಾಗಪ್ಪ, ಕೆ.ಎ.ಎಸ್. (ಹಿರಿಯ ಶ್ರೇಣಿ) ಅಧಿಕಾರಿ ಅಪರ ಜಿಲ್ಲಾಧಿಕಾರಿಗಳು, ಚಾಮರಾಜನಗರ ಜಿಲ್ಲೆ ಇವರ ವಿರುದ್ಧ ದಾಖಲಾದ ದಾಳಿ ಪ್ರಕರಣ ಮತ್ತು ಅವರನ್ನು ಸೇವೆಯಿಂದ ಅಮಾನತ್ತುಗೊಳಿಸುವ ಬಗ್ಗೆ.

**ಓದಲಾಗಿದೆ :** ಅಪರ ಪೋಲಿಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ರವರ ಪತ್ರ ಸಂ. ಲೋಕ್/ಐಎನ್‌ವಿ(ಚಿ)/ಜಿ–66, ಸಿ.ಆರ್. 25/2009, ರಾಯಚೂರು, ದಿನಾಂಕ 11–12–2009

**ಪ್ರಸ್ತಾವನೆ :**

ಶ್ರೀ ಸಿರಸಗಿ ನಾಗಪ್ಪ, ಕೆ.ಎ.ಎಸ್. (ಹಿರಿಯ ಶ್ರೇಣಿ) ಅಧಿಕಾರಿ ಅಪರ ಜಿಲ್ಲಾಧಿಕಾರಿ, ಚಾಮರಾಜನಗರ ಜಿಲ್ಲೆ ಇವರು ತಮ್ಮ ಬಲ್ಲ ಮೂಲಗಳಿಗಿಂತ ಅಪಾರ ಪ್ರಮಾಣದ ಅಧಿಕ ಆಸ್ತಿಯನ್ನು ಹೊಂದಿದ್ದಾರೆಂದು ತಿಳಿದು ಬಂದ ಹಿನ್ನೆಲೆಯಲ್ಲಿ ಲೋಕಾಯುಕ್ತ ಪೋಲಿಸರು ಇವರ ವಿರುದ್ಧ ರಾಯಚೂರು ಕರ್ನಾಟಕ ಲೋಕಾಯುಕ್ತ ಪೋಲಿಸ್ ಠಾಣೆಯಲ್ಲಿ ಮೊಕದ್ದಮೆ ಸಂ. 25/2009 ಅನ್ನು ದಾಖಲಿಸಿಕೊಂಡು ಭ್ರಷ್ಟಾಚಾರ ನಿಯಂತ್ರಣ ಕಾಯ್ದೆ 1988ರ ಕಲಂ 13(1)(ಇ) ಹಾಗೂ 13(2)ರಡಿ ಶ್ರೀ ಸಿರಸಗಿ ನಾಗಪ್ಪ, ಕೆ.ಎ.ಎಸ್. ಇವರ ಮನೆ ಮತ್ತು ಕಛೇರಿಗಳ ಮೇಲೆ ದಿನಾಂಕ 1–12–2009ರಂದು ದಾಳಿ ನಡೆಸಿ ಇವರ ವಿರುದ್ಧ ಪ್ರಕರಣ ದಾಖಲಿಸಿಕೊಂಡಿರುವುದಾಗಿ ಮೇಲೆ ಓದಲಾದ ಕ್ರಮ ಸಂ./(1)ರ ಪತ್ರದಲ್ಲಿ ಅಪರ ಪೋಲಿಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ ರವರು ವರದಿ ಮಾಡಿರುತ್ತಾರೆ. ಸದರಿ ವರದಿಯಲ್ಲಿ ಶ್ರೀ ಸಿರಸಗಿ ನಾಗಪ್ಪ, ಕೆ.ಎ.ಎಸ್. ಇವರು ತಮ್ಮ ಬಲ್ಲ ಮೂಲಗಳಿಗಿಂತ ಸುಮಾರು ರೂ. 1,18,26,370/– ಗಳಷ್ಟು ಅಧಿಕ ಮೊತ್ತದ ಆಸ್ತಿ ಪಾಸ್ತಿ ಗಳಿಸಿ ಸುಮಾರು ಶೇಕಡ 151.60ರಷ್ಟು ಅಧಿಕ ಆದಾಯವನ್ನು ಹೊಂದಿರುತ್ತಾರೆ ಎಂದು ವರದಿ ಮಾಡಿರುತ್ತಾರೆ. ಇದರಿಂದಾಗಿ ಸದರಿಯವರ ಮೇಲೆ ಕಲಂ 13(1)(ಇ) ಜೊತೆಗೆ 13(2) ಪಿ.ಸಿ. ಕಾಯ್ದೆ 1988ರಂತೆ ಮೊಕದ್ದಮೆ ದಾಖಲು ಮಾಡಿ ಪ್ರಥಮ ವರ್ತಮಾನ ವರದಿಯನ್ನು ಮಾನ್ಯ ನ್ಯಾಯಾಲಯಕ್ಕೆ ಮತ್ತು ಮೇಲಾಧಿಕಾರಿಗಳಿಗೂ ನಿವೇದಿಸಿರುವುದಾಗಿ ತಿಳಿಸಿರುತ್ತಾರೆ ಇದರಿಂದಾಗಿ ಸದರಿಯವರು ಭ್ರಷ್ಟಾಚಾರ ನಿರೋಧ ಕಾಯ್ದೆ 1988ರ ಕಲಂ 13(1)(ಇ) ಜೊತೆಗೆ 13(2) ರಡಿ ಶಿಕ್ಷಾರ್ಹ ಅಪರಾಧವೆಸಗಿರುವುದು ಮೇಲ್ನೋಟಕ್ಕೆ ಸ್ಪಷ್ಟವಾಗಿ ಕಂಡುಬರುತ್ತದೆ. ಈ ಹಿನ್ನೆಲೆಯಲ್ಲಿ ಆಪಾದಿತ ಅಧಿಕಾರಿ ಶ್ರೀ ಸಿರಸಗಿ ನಾಗಪ್ಪ, ಕೆ.ಎ.ಎಸ್. ಇವರು ಅವರ ಸ್ಥಾನದಲ್ಲಿಯೇ ಮುಂದುವರೆದರೆ ತಮ್ಮ ಪ್ರಭಾವವನ್ನು ಬೀರುವುದರ ಮೂಲಕ ಸಾಕ್ಷಾಧಾರಗಳನ್ನು ನಾಶಪಡಿಸಿ ತನಿಖೆಗೆ ಅಡ್ಡಿ ಅಡಚಣೆ ಉಂಟು ಮಾಡುವ ಸಾಧ್ಯತೆಗಳಿರುವುದರಿಂದ ಇವರನ್ನು ಸೇವೆಯಿಂದ ಅಮಾನತ್ತುಗೊಳಿಸಿ ಅವರ ಸ್ಥಾನವನ್ನು ಪಲ್ಲಟಗೊಳಿಸಲು ಅಪರ ಪೋಲಿಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ ಬೆಂಗಳೂರು ರವರು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಸರ್ಕಾರವು ಕರ್ನಾಟಕ ಲೋಕಾಯುಕ್ತದ, ಅಪರ ಪೋಲಿಸ್ ಮಹಾನಿರ್ದೇಶಕರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದೆ. ಕರ್ನಾಟಕ ಲೋಕಾಯುಕ್ತದ ಅಪರ ಪೋಲಿಸ್ ಮಹಾನಿರ್ದೇಶಕರು ವರದಿ ಮಾಡಿರುವ ಹಿನ್ನೆಲೆಯಲ್ಲಿ

ಆಪಾದಿತ ಅಧಿಕಾರಿಯು ತಮ್ಮ ಬಲ್ಲ ಮೂಲಗಳಿಗಿಂತ ಅಪಾರ ಪ್ರಮಾಣದ ಅಧಿಕ ಆಸ್ತಿಯನ್ನು ಹೊಂದಿದ್ದಾರೆಂದು ಹಾಗೂ ಆಪಾದಿತರ ಭ್ರಷ್ಟಾಚಾರವು ಮೇಲ್ನೋಟಕ್ಕೆ ಸಾಬೀತು ಪಡುವುದರಿಂದಲೂ ಪ್ರಕರಣದ ಸುಗಮ ತನಿಖೆಗೆ ಅವಕಾಶ ಕಲ್ಪಿಸುವ ಅವಶ್ಯಕತೆಯನ್ನು ಮನಗಂಡು ಸರ್ಕಾರವು ಶ್ರೀ ಸಿರಸಗಿ ನಾಗಪ್ಪ, ಕೆ.ಎ.ಎಸ್. (ಹಿರಿಯ ಶ್ರೇಣಿ) ಅಧಿಕಾರಿ ಅವರನ್ನು ಮುಂದಿನ ತನಿಖೆ/ವಿಚಾರಣೆಯನ್ನು ಕಾಯ್ದಿರಿಸಿ ಅಮಾನತ್ತಿನಲ್ಲಿರಿಸಲು ನಿರ್ಣಯಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ : ಸಂ/ಸಿಆಸುಇ 49 ಕೆಇವಿ 2009, ದಿನಾಂಕ 23ನೇ ಜನವರಿ 2010**

ಕರ್ನಾಟಕ ನಾಗರೀಕ ಸೇವಾ ವರ್ಗೀಕರಣ, (ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 10(1) (aa) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಸಿರಸಗಿ ನಾಗಪ್ಪ, ಕೆ.ಎ.ಎಸ್. (ಹಿರಿಯ ಶ್ರೇಣಿ) ಅಧಿಕಾರಿ ಅಪರ ಜಿಲ್ಲಾಧಿಕಾರಿ ಹಾಗೂ ಅಪರ ಜಿಲ್ಲಾ ದಂಡಾಧಿಕಾರಿ, ಚಾಮರಾಜನಗರ ಜಿಲ್ಲೆ ಇವರ ವಿರುದ್ಧ ಶಿಸ್ತು ಕ್ರಮ/ವಿಚಾರಣೆಯನ್ನು ಕಾಯ್ದಿಟ್ಟು ಕೂಡಲೆ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಈ ಮೂಲಕ ಸೇವೆಯಿಂದ ಅಮಾನತ್ತಿನಲ್ಲಿಡುತ್ತದೆ.

ಅಮಾನತ್ತಿನ ಅವಧಿಯಲ್ಲಿ ಶ್ರೀ ಸಿರಸಗಿ ನಾಗಪ್ಪ, ಕೆ.ಎ.ಎಸ್. ಅಧಿಕಾರಿರವರು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ 96ರ ನಿಯಮದನ್ವಯ ಜೀವನಾಧಾರದ ಭತ್ಯೆಯನ್ನು ಪಡೆಯುತ್ತಾರೆ.

ಅಮಾನತ್ತಿನ ಅವಧಿಯಲ್ಲಿ ಶ್ರೀ ಸಿರಸಗಿ ನಾಗಪ್ಪ, ಕೆ.ಎ.ಎಸ್. ರವರು ಸಕ್ಷಮ ಪ್ರಾಧಿಕಾರದ ಅನುಮತಿಯನ್ನು ಪಡೆಯದೇ ಕೇಂದ್ರ ಸ್ಥಾನವನ್ನು ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**(ಎಚ್. ಆರ್. ನಾಗೇಂದ್ರ)**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಆಸುಇ (ಸೇವೆಗಳು–2)

ಪಿಆರ್–305

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಬಿಜಾಪುರ ಜಿಲ್ಲೆ, ಮುದ್ದೇಬಿಹಾಳ ತಾಲ್ಲೂಕು, ಡೊಂಕುಮಡು ಗ್ರಾಮದ ಹತ್ತಿರ ಬಾಂದಾರ ನಿರ್ಮಾಣ ಕಾಮಗಾರಿಯ ಟೆಂಡರ್ ಅಂಗೀಕರಿಸುವ ಕುರಿತು.

**ಓದಲಾಗಿದೆ :**
1) ಸರ್ಕಾರದ ಆದೇಶ ಸಂಖ್ಯೆ / ಸನೀಇ 15, ಮಸಾವಿ 2009(3), ದಿನಾಂಕ 02–03–09
2) ಪತ್ರ ಸಂಖ್ಯೆ/ಮುಇಂ/ಸನೀ(ಉ)ವ/ಬಿಜೆಪಿ/ಪಿಬಿ–9/ಡೊಂಕುಮಡು ಬಾಂದಾರ/2009–10/7518, ದಿನಾಂಕ 16–12–09.
3) ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ, ಸಣ್ಣ ನೀರಾವರಿ ಇಲಾಖೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ರವರ ಪತ್ರ ಸಂಖ್ಯೆ /ಮುಸದ/ಆಪ್ತಶಾಖೆ/ಟೆಂಡರ್/09–10/134, ದಿನಾಂಕ 13–01–10.

**ಪ್ರಸ್ತಾವನೆ :**

ಬಿಜಾಪುರ ಜಿಲ್ಲೆ, ಮುದ್ದೇಬಿಹಾಳ ತಾಲ್ಲೂಕು, ಡೊಂಕುಮಡು ಗ್ರಾಮದ ಹತ್ತಿರ ಬಾಂದಾರ ನಿರ್ಮಾಣ ಮಾಡುವ ಕಾಮಗಾರಿಯ 260.00 ಲಕ್ಷ ರೂ.ಗಳ ಅಂದಾಜು ಪಟ್ಟಿಗೆ ಮೇಲೆ (1)ರಲ್ಲಿ ಓದಲಾದ ದಿನಾಂಕ 02–03–09ರ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಬಿಜಾಪುರ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ದ್ವಿಲಕೋಟೆ ಪದ್ಧತಿಯಲ್ಲಿ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | | |
|---|---|---|
| 1 | ರಾಜ್ಯ ಟೆಂಡರ್ ಬುಲೆಟಿನ್ | ದಿನಾಂಕ : 16–09–09 |
| 2 | ಪ್ರಜಾವಾಣಿ ಕನ್ನಡ ದಿನಪತ್ರಿಕೆ ಹಾಗೂ ಟೈಮ್ಸ್ ಆಫ್ ಇಂಡಿಯಾ ಆಂಗ್ಲ ಪತ್ರಿಕೆ | ದಿನಾಂಕ : 24–09–09 |
| 3 | ವಿಜಯ ಕರ್ನಾಟಕ ದಿನಪತ್ರಿಕೆ | ದಿನಾಂಕ : 25–09–09 |
| 4 | ಕರ್ನಾಟಕ ರಾಜ್ಯಪತ್ರ | ದಿನಾಂಕ : 01–10–09 |

ಈ ಟೆಂಡರ್ ಕರೆಗೆ ಪ್ರತಿಕ್ರಯಿಸಿ ಖಾಲಿ ಟೆಂಡರ್ ಫಾರಂ ಪಡೆದ 17 ಜನ ಗುತ್ತಿಗೆದಾರರಲ್ಲಿ ನಿಗದಿತ ದಿನದಂದು ಇಬ್ಬರು ಗುತ್ತಿಗೆದಾರರು ಮಾತ್ರ ಭರ್ತಿ ಮಾಡಿದ ಟೆಂಡರ್‌ಗಳನ್ನು ಸಲ್ಲಿಸಿರುತ್ತಾರೆ. ಸ್ವೀಕರಿಸಲಾದ ತಾಂತ್ರಿಕ ಬಿಡ್‌ನ್ನು

ದಿನಾಂಕ 24–11–09 ರಂದು ತೆರೆಯಲಾಗಿ ಈ ಇಬ್ಬರೂ ಗುತ್ತಿಗೆದಾರರು ಅರ್ಹತೆ ಹೊಂದಿದ್ದು. ಇವರ ಆರ್ಥಿಕ ಬಿಡ್‌ನ್ನು ದಿನಾಂಕ 25–11–09ರಂದು ತೆರೆಯಲಾಗಿದೆ. ಆರ್ಥಿಕ ಬಿಡ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳ ತುಲನಾತ್ಮಕ ವಿವರ ಕೆಳಕಂಡಂತಿದೆ :

| | |
|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | ರೂ. 2,55,94,457/– |
| ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಟೆಂಡರಿಗೆ ಇಡಲಾದ ಮೊತ್ತ | ರೂ. 2,54,11,642/– |

| ಕ್ರ. ಸಂ. | ಗುತ್ತಿಗೆದಾರರ ಹೆಸರು ಮತ್ತು ದರ್ಜೆ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ | ಪ್ರಸಕ್ತ ಸಾಲಿನ ದರಗಳ ಮೇಲಿನ ಶೇಕಡವಾರು ಹೆಚ್ಚಳ |
|---|---|---|---|---|
| 1 | *ಶ್ರೀ/ಮೆಸರ್ಸ್ :* ಜಿ. ಮಸ್ತಾನಯ್ಯ 1ನೇ ದರ್ಜೆ ಗುತ್ತಿಗೆದಾರರು | ರೂ. 3,02,17,206/– | 18.06 ಹೆಚ್ಚು | 18.91 ಹೆಚ್ಚು |
| 2 | ಜಿ. ಶಂಕರ 1ನೇ ದರ್ಜೆ ಗುತ್ತಿಗೆದಾರರು | ರೂ. 3,21,07,869/– | 25.44 ಹೆಚ್ಚು | 26.35 ಹೆಚ್ಚು |

ಕಡಿಮೆ ಮೊತ್ತ ಸೂಚಿಸಿರುವ ಮೇಲ್ಕಂಡ ಕ್ರ.ಸಂ. (1) ರಲ್ಲಿರುವ ಶ್ರೀ ಜಿ. ಮಸ್ತಾನಯ್ಯ, 1ನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 18.91ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರ್‌ನ್ನು ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ (2) ರಲ್ಲಿ ಓದಲಾದ ಪತ್ರದಲ್ಲಿ ಸರ್ಕಾರದ ಅನುಮೋದನೆ ಕೋರಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ 13–01–10ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ ಗುತ್ತಿಗೆದಾರದ ಮನವಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 2,54,11,642–00ಗಳ ಮೇಲೆ ಶೇಕಡ 14.50ರಷ್ಟು ಹೆಚ್ಚಿನ ದರಗಳ ಅಂದರೆ ರೂ. 2,90,96,330–00ಗಳಿಗೆ ಕಾಮಗಾರಿಯನ್ನು ಶ್ರೀ ಜಿ. ಮಸ್ತಾನಯ್ಯ, 1ನೇ ದರ್ಜೆ ಗುತ್ತಿಗೆದಾರರು, ಬಿಜಾಪುರ ಇವರಿಗೆ ವಹಿಸಲು ಸಭೆಯಲ್ಲಿ ತೀರ್ಮಾನಿಸಲಾಯಿತು. ಈ ನಿರ್ಧಾರಕ್ಕೆ ಗುತ್ತಿಗೆದಾರರು ತಮ್ಮ ಒಪ್ಪಿಗೆಯನ್ನು ಸೂಚಿಸಿರುವುದಾಗಿ ತಿಳಿಸಿ ಈ ಮೊತ್ತಕ್ಕೆ ಟೆಂಡರ್ ಅಂಗೀಕರಿಸಲು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯು ಮೇಲೆ 3ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸನೀಇ 93 ಅಪಿಬಂ 2009, ಬೆಂಗಳೂರು, ದಿನಾಂಕ 30ನೇ ಜನವರಿ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬಿಜಾಪುರ ಜಿಲ್ಲೆ, ಮುದ್ದೇಬಿಹಾಳ ತಾಲ್ಲೂಕು, ಡೊಂಕುಮಡು ಗ್ರಾಮದ ಹತ್ತಿರ ಬಾಂದಾರ ನಿರ್ಮಾಣ ಕಾಮಗಾರಿಯ ಮಂಜೂರಾದ ಅಂದಾಜು ಪಟ್ಟಿ ಹಾಗೂ ಪ್ರಸಕ್ತ ಸಾಲಿನ ದರಪಟ್ಟಿಯಂತೆ ಪರಿಷ್ಕರಿಸಿದ ಟೆಂಡರಿಗೆ ಇಡಲಾದ ಮೊತ್ತ ರೂ. 2,54,11,642–00 ಗಳ ಮೇಲೆ ಶೇಕಡ 14.50ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 2,90,96,330–00 ಗಳಿಗೆ (ಎರಡು ಕೋಟಿ ತೊಂಭತ್ತು ಲಕ್ಷದ ತೊಂಭತ್ತಾರು ಸಾವಿರದ ಮುನ್ನೂರ ಮುವತ್ತು ರೂ. ಗಳು ಮಾತ್ರ) ಶ್ರೀ ಜಿ. ಮಸ್ತಾನಯ್ಯ, 1ನೇ ದರ್ಜೆ ಗುತ್ತಿಗೆದಾರರು, ಬಿಜಾಪುರ ಇವರಿಗೆ ಕಾಮಗಾರಿಯನ್ನು ಕೆಳಕಂಡ ಷರತ್ತುಗಳೊಂದಿಗೆ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು
3. ಅಸಹಜ ದರಗಳನ್ನು ಸಮನ್ವಯಪಡಿಸಿಕೊಳ್ಳುವುದು

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ 20–01–2003 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಕೆ. ಸುಧಾಕರ ಶೆಟ್ಟಿ)**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 306 ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ

**ವಿಷಯ :** ಗುಲ್ಬರ್ಗಾದಲ್ಲಿ ಮಾಹಿತಿ ತಂತ್ರಜ್ಞಾನ ಉದ್ಯಾನವನ್ನು ಕಿಯೋನಿಕ್ಸ್ ಸಂಸ್ಥೆಯಿಂದ ಸ್ಥಾಪಿಸುವ ಬಗ್ಗೆ :–

**ಓದಲಾಗಿದೆ :** ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ವಿದ್ಯುನ್ಮಾನ ಅಭಿವೃದ್ಧಿ ನಿಗಮ ನಿಯಮಿತರವರ ಪತ್ರ ಸಂಖ್ಯೆ ಕೆಎಸ್ಇಡಿಸಿ/ಗುಲ್ಬರ್ಗಾ/ಐಟಿ ಪಾರ್ಕ್/2009–10, ದಿನಾಂಕ 28–10–2009

**ಪ್ರಸ್ತಾವನೆ :**

2008–09ನೇ ಸಾಲಿನ ಆರ್ಥಿಕ ವರ್ಷದ ಆಯವ್ಯಯ ಭಾಷಣದಲ್ಲಿ ಮಾನ್ಯ ಮುಖ್ಯಮಂತ್ರಿಯವರು ಹುಬ್ಬಳ್ಳಿ–ಧಾರವಾಡ, ಬೆಳಗಾಂ, ಗುಲ್ಬರ್ಗಾ, ಶಿವಮೊಗ್ಗ, ದಾವಣಗೆರೆ, ಮಂಗಳೂರು ನಗರಗಳಲ್ಲಿ ಖಾಸಗಿ ಸಹಭಾಗಿತ್ವದ ಮತ್ತು ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿ ಜಾಯಿಂಟ್ ವೆಂಚರ್ ಮೂಲಕ ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಉದ್ಯಾನಗಳನ್ನು ಸ್ಥಾಪಿಸಲು ಉದ್ದೇಶಿಸಲಾಗಿದೆಯೆಂದು ಘೋಷಿಸಿದ್ದರು.

ಸದರಿ ಘೋಷಣೆಯನ್ನು ಅನುಸರಿಸಿ ಕರ್ನಾಟಕ ರಾಜ್ಯ ವಿದ್ಯುನ್ಮಾನ ಅಭಿವೃದ್ಧಿ ನಿಗಮವು (ಕಿಯೋನಿಕ್ಸ್) 2 ಮತ್ತು 3ನೇ ದರ್ಜೆಯ ನಗರಗಳಾದ ಶಿವಮೊಗ್ಗ, ಮಂಗಳೂರು ಮತ್ತು ಮೈಸೂರುಗಳಲ್ಲಿ ಮಾಹಿತಿ ತಂತ್ರಜ್ಞಾನ ಉದ್ಯಾನಗಳ ಸ್ಥಾಪನೆ ಮತ್ತು ಅಭಿವೃದ್ಧಿಯನ್ನು ಕೈಗೆತ್ತಿಕೊಂಡಿದೆ. 2008–09ನೇ ಸಾಲಿನಲ್ಲಿ ಸರ್ಕಾರವು ರೂ. 5 ಕೋಟಿ ಹಾಗೂ ಪ್ರಸ್ತುತ ಸಾಲಿನಲ್ಲಿ ರೂ. 2.5 ಕೋಟಿ ಈಕ್ವಿಟಿ ಮೊತ್ತವನ್ನು/ಬಂಡವಾಳ ವಂತಿಗೆಯನ್ನು ಕಿಯೋನಿಕ್ಸ್ ಸಂಸ್ಥೆಗೆ ಮೇಲಿನ ಯೋಜನೆಗಳನ್ನು ಅಭಿವೃದ್ಧಿಪಡಿಸಲು ಬಿಡುಗಡೆ ಮಾಡಿದೆ.

ಡಾ॥ ನಂಜುಂಡಪ್ಪ ಸಮಿತಿಯ ವರದಿಯ ಪ್ರಕಾರ, ಗುಲ್ಬರ್ಗಾವು ಹಿಂದುಳಿದ ಪ್ರದೇಶವೆಂದು ಘೋಷಿಸಲ್ಪಟ್ಟಿದೆ. ಅಧ್ಯಕ್ಷರು, ಹೈದರಾಬಾದ್–ಕರ್ನಾಟಕ ವಾಣಿಜ್ಯ ಮತ್ತು ಕೈಗಾರಿಕಾ ಸಂಸ್ಥೆ, ಗುಲ್ಬರ್ಗಾ ಇವರು ಹೈದರಾಬಾದ್–ಕರ್ನಾಟಕ ಪ್ರದೇಶದಲ್ಲಿ ಪ್ರಾದೇಶಿಕ ಅಸಮತೋಲತೆಯನ್ನು ನಿವಾರಿಸಲು ಗುಲ್ಬರ್ಗಾದಲ್ಲಿ ಮಾಹಿತಿ ತಂತ್ರಜ್ಞಾನ ಉದ್ಯಾನವನ್ನು ಸ್ಥಾಪಿಸಲು ಕೋರಿರುತ್ತಾರೆ.

2009–10ನೇ ಸಾಲಿನ ಆರ್ಥಿಕ ವರ್ಷದ ಆಯವ್ಯಯ ಭಾಷಣದಲ್ಲಿ ಗುಲ್ಬರ್ಗಾ ವಿಭಾಗದಲ್ಲಿ ಮಾಹಿತಿ ತಂತ್ರಜ್ಞಾನವನ್ನು ಉನ್ನತೀಕರಿಸಲು ರೂ. 10 ಕೋಟಿಗಳ ಮೊತ್ತವನ್ನು ಮಾಹಿತಿ ತಂತ್ರಜ್ಞಾನ ಉದ್ಯಾನವನ್ನು ಕಿಯೋನಿಕ್ಸ್ ಸಂಸ್ಥೆಯ ಮೂಲಕ ಸ್ಥಾಪಿಸಲು ಒದಗಿಸಲಾಗುವುದೆಂದು ಘೋಷಿಸಿರುತ್ತಾರೆ. ಅದರನ್ವಯ ಕಿಯೋನಿಕ್ಸ್ ಸಂಸ್ಥೆಯು ಗುಲ್ಬರ್ಗಾದಲ್ಲಿ ಕರ್ನಾಟಕ ಹೌಸಿಂಗ್ ಬೋರ್ಡ್ ಲೇಔಟ್‌ನಲ್ಲಿನ ಕಮರ್ಷಿಯಲ್ ಪ್ಲಾಟ್ ಸಂಖ್ಯೆ 5, (ಹೈಕೋರ್ಟ್ ಸರ್ಕ್ಯೂಟ್ ಬೆಂಚ್‌ಗೆ ಎದುರು) ರಲ್ಲಿ 75,097 ಚದರಡಿ (1.72 ಎಕರೆ) ಪ್ರದೇಶದಲ್ಲಿ ಮೂರು ಹಂತಗಳಲ್ಲಿ ತಲಾ 50,000 ಚದರಡಿಯ ಹೈಟೆಕ್ ಮಾಹಿತಿ ತಂತ್ರಜ್ಞಾನ ಉದ್ಯಾನವನ್ನು ಜಾಗದ ಬೇಡಿಕೆಗೆ ಅನುಗುಣವಾಗಿ ಮೂರು ವರ್ಷಗಳ ಅವಧಿಯಲ್ಲಿ ಸ್ಥಾಪಿಸಲು ಉದ್ದೇಶಿಸಲಾಗಿದೆ.

ಮೊದಲ ಹಂತದಲ್ಲಿ ಕಿಯೋನಿಕ್ ಸಂಸ್ಥೆಯು ತಲಾ 10,000 ಚದರಡಿಯ ಐದು ಮಹಡಿಗಳ 50,000 ಚದರಡಿಯ ಬ್ಲಾಕ್‌ನ್ನು ರೂ. 998.31 ಲಕ್ಷಗಳ ವೆಚ್ಚದಲ್ಲಿ ಅಭಿವೃದ್ಧಿಪಡಿಸಲು ಉದ್ದೇಶಿಸಿದ್ದು, ಅದರ ವಿವರ ಈ ಕೆಳಕಂಡಂತಿದೆ :–

**Project Cost (Phase I)**

| | | |
|---|---|---|
| 1. | Cost of the Land @ Rs. 300 per sq. ft. for 75097 sq.ft (1.72 acres) | Rs. 225.00 Lakhs |
| 2 | Land the development charges @ Rs. 20.00 Lakhs per acre (1.72 acres) | Rs. 34.40 Lakhs |
| 3 | Cost of the building-Phase I @ Rs. 1200 per sq. ft. for 50.000 sq.ft. | Rs. 600.00 Lakhs |
| 4 | IT Infrastructure Development cost Power, Back-up power, High speed Communication connectivity etc, @ Rs. 200/- per sq-ft on (3) | Rs. 100.00 Lakhs |
| 5 | Incidentals, 15% on (1+2) | Rs. 38.91 Lakhs |
| | **Total Project Cost** | **Rs. 998.31 Lakhs** |

ಮೇಲೆ ಓದಲಾದ ಕಿಯೋನಿಕ್ಸ್ ಸಂಸ್ಥೆಯ ವ್ಯವಸ್ಥಾಯಕ ನಿರ್ದೇಶಕರು (ಆಪರೇಷನ್ಸ್) ರವರ ಪತ್ರದಲ್ಲಿ ಗುಲ್ಬರ್ಗಾದಲ್ಲಿ ಮಾಹಿತಿ ತಂತ್ರಜ್ಞಾನ ಉದ್ಯಾನದ ಯೋಜನೆಯ ಮೊದಲ ಹಂತದ ($1^{st}$ phase of IT Park project) ಕಾಮಗಾರಿಯನ್ನು ರೂ. 9.98 ಕೋಟಿ ವೆಚ್ಚದಲ್ಲಿ ಕೈಗೆತ್ತಿಕೊಳ್ಳಲು ಹಾಗೂ ಅಂದಾಜು ವೆಚ್ಚದಲ್ಲಿ ಶೇಕಡ 80 ರಷ್ಟು ವೆಚ್ಚವನ್ನು

ಕಿಯೋನಿಕ್ಸ್ ಸಂಸ್ಥೆಯಿಂದ ಭರಿಸಲು ಒಪ್ಪಿದ, ಉಳಿದ ಶೇಕಡ 20ರಷ್ಟನ್ನು ವೆಚ್ಚ ಅಂದರೆ ರೂ. 199.60 ಲಕ್ಷಗಳ ಅನುದಾನವನ್ನು ಸರ್ಕಾರದ ವತಿಯಿಂದ ಬಿಡುಗಡೆ ಮಾಡುವಂತೆ ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಮಾತಂಇ 24 ಎಂಡಿಎ 2008, ಬೆಂಗಳೂರು, ದಿನಾಂಕ 01ನೇ ಫೆಬ್ರವರಿ 2010**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ, ಕಿಯೋನಿಕ್ಸ್ ಸಂಸ್ಥೆಯ ವತಿಯಿಂದ ಗುಲ್ಬರ್ಗದಲ್ಲಿ ಮಾಹಿತಿ ತಂತ್ರಜ್ಞಾನ ಉದ್ಯಾನವನ್ನು ಈ ಕೆಳಕಂಡಂತೆ ಸ್ಥಾಪಿಸಲು ಅನುಮೋದನೆ ನೀಡಲಾಗಿದೆ :-

I. ಗುಲ್ಬರ್ಗಾದಲ್ಲಿ ಕರ್ನಾಟಕ ಹೌಸಿಂಗ್ ಬೋರ್ಡ್ ಲೇಔಟ್‌ನಲ್ಲಿನ ಕಮರ್ಷಿಯಲ್ ಪ್ಲಾಟ್ ಸಂಖ್ಯೆ 5, (ಹೈಕೋರ್ಟ್ ಸರ್ಕ್ಯೂಟ್ ಬೆಂಚ್‌ಗೆ ಎದುರು) ಇಲ್ಲಿ ಮೂರು ಹಂತಗಳಲ್ಲಿ ರೂ. 2,590 ಲಕ್ಷಗಳ ಅಂದಾಜು ವಚ್ಚದಲ್ಲಿ ಮಾಹಿತಿ ತಂತ್ರಜ್ಞಾನ ಉದ್ಯಾನವನ್ನು ಸ್ಥಾಪಿಸಲು ;

II. ರೂ. 998.31 ಲಕ್ಷದ ಅಂದಾಜು ವೆಚ್ಚದ ಮಾಹಿತಿ ತಂತ್ರಜ್ಞಾನ ಉದ್ಯಾನದ ಮೊದಲ ಹಂತದ ಅಭಿವೃದ್ಧಿಯನ್ನು ಕೈಗೆತ್ತಿಗೊಳ್ಳಲು ಹಾಗೂ ಸುಮಾರು 50,000 ಚದರಡಿಯ ಐದು ಮಹಡಿಗಳ ಕಟ್ಟಡವನ್ನು ನಿರ್ಮಿಸಲು;

III. ಸರ್ಕಾರದ ಆರ್ಥಿಕ ಬೆಂಬಲವು ಯೋಜನೆಯ ಮೊದಲ ಹಂತದ ಅಂದಾಜು ವೆಚ್ಚದ ಶೇಕಡ 20ರಷ್ಟು ಅಂದರೆ ರೂ. 199.00 ಲಕ್ಷಕ್ಕೆ ಸೀಮಿತವಾಗಿದ್ದು, ಪ್ರಸಕ್ತ ಸಾಲಿನ ಆಯವ್ಯಯ ಲೆಕ್ಕ ಶೀರ್ಷಿಕೆ 5465-01-190-1-13 ಹಂತ 2 ನಗರಗಳ ಸಲುವಾಗಿ ಕಿಯೋನಿಕ್ಸ್‌ನಲ್ಲಿ ಸಾಮ್ಯಷೇರು-ಮಾಹಿತಿ ತಂತ್ರಜ್ಞಾನ ಅಭಿವೃದ್ಧಿ-059 ಇತರೆ ಖರ್ಚು (ಯೋಜನೆ) ಇದರಡಿ ಲಭ್ಯವಿರುವ ಅನುದಾನದಿಂದ ರೂ. 200.00 ಲಕ್ಷಗಳನ್ನು (ಶೇಕಡ 20 ರಷ್ಟು) ರಾಜ್ಯದ ಪಾಲಿನ ಮೊತ್ತವಾಗಿ ನಿರ್ದೇಶಕರು, ಕರ್ನಾಟಕ ವಿದ್ಯುನ್ಮಾನ ಅಭಿವೃದ್ಧಿ ನಿಗಮ ನಿಯಮಿತ ರವರಿಗೆ ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯದ ಮುಖಾಂತರ ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ. ಉಳಿದ ವೆಚ್ಚದ ಮೊತ್ತ ರೂ. 798.71 ಲಕ್ಷಗಳನ್ನು ಕಿಯೋನಿಕ್ಸ್ ಸಂಸ್ಥೆಯು ತನ್ನ ಸ್ವಂತ ನಿಧಿಯಿಂದ ಭರಿಸತಕ್ಕದ್ದು.

ಸದರಿ ಅನುದಾನವನ್ನು ಆಡಳಿತಾಧಿಕಾರಿಗಳು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ ಇವರು ನಿರ್ದೇಶಕರು ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ ಇವರ ಮೇಲು ಸಹಿ ಪಡೆದು ಖಜಾನೆಯಿಂದ ಸದರಿ ಅನುದಾನವನ್ನು ಡ್ರಾ ಮಾಡಿ ವಿತರಿಸತಕ್ಕದ್ದು.

ನಿರ್ದೇಶಕರು ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ ಇವರು ಸದರಿ ಅನುದಾನದ ಬಳಕೆಯ ಬಗ್ಗೆ ನಿರ್ದೇಶಕರು, ಕರ್ನಾಟಕ ವಿದ್ಯುನ್ಮಾನ ಅಭಿವೃದ್ಧಿ ನಿಗಮ ನಿಯಮಿತರವರಿಂದ ಉಪಯೋಗಿತಾ ದೃಢೀಕರಣ ಪತ್ರವನ್ನು ವೆಚ್ಚ ಮಾಡಿದ ಅನುದಾನದ ವಿವರಗಳ ಜೊತೆಗೆ ಪಡೆದು ಈ ಆರ್ಥಿಕ ವರ್ಷದೊಳಗಾಗಿ ಸರ್ಕಾರಕ್ಕೆ ಒದಗಿಸತಕ್ಕದ್ದು.

ಈ ಆದೇಶವನ್ನು ಟಿಪ್ಪಣಿ ಸಂಖ್ಯೆ ಆಇ 07 ವೆಚ್ಚ-2/2010, ದಿನಾಂಕ 23-01-2010 ರನ್ವಯ ಆರ್ಥಿಕ ಇಲಾಖೆಯ ಸಹಮತಿಯ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಎಂ. ವಿ. ಕೃಷ್ಣಮೂರ್ತಿ)**

ಸರ್ಕಾರದ ಅಧೀನ ಕಾರ್ಯದರ್ಶಿ,

ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ

ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ

ಪಿ.ಆರ್. 307

## INFORMATION TECHNOLOGY, BIO-TECHNOLOGY AND SCIENCE AND TECHNOLOGY SECRETARIAT

**Sub :-** Setting up of Network Operating Centre (NOC) and Incubation Facility at the proposed IT Parks in Belgaum, Shimoga and Gulbarga.

**Read :-** 1. Letter No. STPI/B/Dir/09-10, dated 3-11-2009 from the Director, STPI, Bangalore.

2. Letter No. DIT/NOC/STPI/2009-10/563, dated 17-11-2009 of The Director, Information Technology, Bio-technology, Bangalore.

**Preamble:**

The State Government intends to promote the Information Technology development in Tier II and Tier III cities of the State. Hence, the department proposes to develop IT parks in places such as Shimoga, Gulbarga and Belgaum through KEONICS, Government of Karnataka undertaking under the

control of Department of Information Technology, Bio Technology and Science & Technology. The development of IT infrastructure includes providing high speed data communication and incubation facility and Network Operating Centre.

Government of India in order to promote and facilitate software experts initiated the scheme of setting up of Software Technology Parks of India [STPI] which is an autonomous society under Ministry of Communication and Information Technology, Government of India which provides incubation facility, high speed data communication to the software companies in Karnataka. As per the STPI norms, State Government will have to provide built up space for setting up of Network Operating Centre (NOC) and an amount of Rs. 1.00 crore per location to develop the Incubation Centre.

The Director, STPI vide their letter read at (1) above, has intimated that the estimated cost of the projects for Belgaum and Shimoga would be Rs. 3.44 crores each including operational cost and Gulbarga Rs. 2.7 crores. Hence, has requested to release an amount of Rs. 1.00 crore to each of the project as Grant-in-aid.

Having examined the proposal, it is considered necessary to release Rs. 150 lakhs @ Rs. 50 lakhs for each location for setting up of Network Operating Centre & Incubation Facility in Belgaum, Shimoga & Gulbarga for the year 2009-10 to be met out of the provision, made under Head of Account **"3451-00-090-2-01 Information Technology-Promotion & Development – 059 Other Expenditure (Plan) " for the year 2009-10.** Hence, the Order.

**Government Order No. ITD 35 MDA 2009 Bangalore, dated : 01-02-2010**

In the circumstances explained in the preamble, Government are pleased to accord sanction for release of Rs. 150 lakhs (Rupees one hundred and fifty lakhs only) for setting up of Network Operation Centre (NOC) and Incubation Facility at the proposed IT Parks in Belgaum, Shimoga and Gulbarga @ Rs. 50 lakhs for each project for the year 2009-10 to the Director of Information Technology and Bio Technology who shall draw the said amount and disburse the same to the Managing Director, KEONICS, & in turn he will disburse to the Director, Software Technology Parks of India, Bangalore subject to the following conditions :-

**(i)** The funds released to KEONICS is to be put up under separate account with **title " GOK- Network Operating Centre (NOC) and Incubation Facility at IT Parks in Belgaum, Shimoga and Gulbarga – Project regarding"**

(ii) The funds will be operated only by MD-KEONICS.

(iii) Funds shall not be utilized for any other purpose that intended for.

(iv) As and when clearance is received from STPI, KEONICS will furnish quarterly expenditure statement clearly to the Government regularly.

The expenditure on this account shall be met, out of the budget provision made under the Head of Account **"3451-00-090-2-01 Information Technology-Promotion & Development – 059 Other Expenditure (Plan)"** for the year 2009-10.

The Administrative Officer, Directorate of Information Technology & Bio Technology Department shall draw the said grant from the Treasury duly countersigned by the Director, Information Technology & Biotechnology and disburse the amount.

The Director, Software Technology Parks of India, Bangalore shall submit the Utilization Certificate in the prescribed format through the Managing Director, KEONICS and the Director, Information Technology and Biotechnology, Bangalore.

This Order issues with the concurrence of Finance Department vide their Note in No. FD 08 Exp-2/2010, dated 16-01-2010.

By Order and in the name of the Governor of Karnataka

(**M.V. Krishnamurthy)**

Under Secretary to Government

Information Technology, Bio Technology

and Science & Technology Department

P.R. 308

**ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ**

**ವಿಷಯ :** ಬೆಂಗಳೂರು ವಿದ್ಯುನ್ಮಾನ ನಗರದ ಜೈವಿಕ ತಂತ್ರಜ್ಞಾನ ಪಾರ್ಕ್‌ನ ಅಭಿವೃದ್ಧಿಗಾಗಿ ಹುಡ್ಕೋ ಸಾಲ – ಅಸಲು ಮತ್ತು ಬಡ್ಡಿಯ ಮರುಪಾವತಿಗಾಗಿ 2010ರ ಮಾರ್ಚ್ ಅಂತ್ಯದ 21ನೇ ಕಂತಿನ ಹಣ ಬಿಡುಗಡೆ ಬಗ್ಗೆ.

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ : ಮಾತಂಇ 22 ಪಿಆರ್‌ಎಂ 2002 ದಿನಾಂಕ : 6–3–2003
2. ಸರ್ಕಾರದ ಆದೇಶ ಸಂಖ್ಯೆ : ಐಟಿಡಿ 07 ಪಿಆರ್‌ಎಂ 2009 ದಿನಾಂಕ : 30–12–2009.
3. ನಿರ್ದೇಶಕರು, ಮಾತಂ ಜೈತಂ ನಿರ್ದೇಶನಾಲಯರವರ ಪತ್ರ ಸಂಖ್ಯೆ ಮಾತಂನಿ/ಕೆಬಿಟ್ಸ್/ಹುಡ್ಕೋ/2009–10, ದಿ : 22–01–10.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶ ದಿನಾಂಕ 6–3–2003ರಲ್ಲಿ ಬೆಂಗಳೂರು ವಿದ್ಯುನ್ಮಾನ ನಗರದ ಜೈವಿಕ ತಂತ್ರಜ್ಞಾನ ಪಾರ್ಕ್‌ನ ಅಭಿವೃದ್ಧಿಗಾಗಿ ಹುಡ್ಕೋ (Housing and Urban Development Corporation) ಸಂಸ್ಥೆಯಿಂದ ರೂ. 20.00 ಕೋಟಿ ಸಾಲವನ್ನು ಎತ್ತುವಳಿ ಮಾಡಲು ಮಂಜೂರಾತಿ ನೀಡಲಾಗಿತ್ತು.

2005ನೇ ವರ್ಷದಿಂದ ಹುಡ್ಕೋ ಸಂಸ್ಥೆಯ ಅಸಲು, ಬಡ್ಡಿಯನ್ನು ಮರುಪಾವತಿಸಲು ಕೆಬಿಟ್ಸ್ ಸಂಸ್ಥೆಗೆ ತ್ರೈಮಾಸಿಕ ಅನುದಾನಗಳನ್ನು ಸರ್ಕಾರವು ಆಗಿಂದಾಗ್ಗೆ ಬಿಡುಗಡೆ ಮಾಡುತ್ತಲಿದೆ.

2009–10ನೇ ಸಾಲಿನ ಆಯವ್ಯಯದಲ್ಲಿ ಸದರಿ ಸಾಲವನ್ನು ಮರುಪಾವತಿಸಲು ಲೆಕ್ಕಶೀರ್ಷಿಕೆ '5465–01–190–1–08 (ಯೋಜನೇತರ) ಮಾಹಿತಿ ಬಾಂಡುಗಳು 240 ಸಾಲ ಮೇಲುಸ್ತುವಾರಿ' ಇದರ ಅಡಿಯಲ್ಲಿ ರೂ. 360.00 ಲಕ್ಷ ಒದಗಿಸಲಾಗಿದೆ.

ಮೇಲೆ (2)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಹುಡ್ಕೋ ಸಾಲದ ಬಾಬ್ತು ಹುಡ್ಕೋ ಸಂಸ್ಥೆಗೆ ಅಸಲು ಮತ್ತು ಬಡ್ಡಿಯ ಬಾಬ್ತು ಪಾವತಿಸಲು ದಿನಾಂಕ 30–12–2009ರ ಅಂತ್ಯದ 20ನೇ ತ್ರೈಮಾಸಿಕ ಕಂತಿನ ಹಣ ರೂ. 80,51,860/–ಗಳ ಅನುದಾನವನ್ನು ಕೆಬಿಟ್ಸ್ ಸಂಸ್ಥೆಗೆ ಬಿಡುಗಡೆ ಮಾಡಲಾಗಿದೆ.

ಮೇಲೆ (3)ರಲ್ಲಿ ಓದಲಾದ ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯದ ಪತ್ರದಲ್ಲಿ ಹುಡ್ಕೋ ಸಂಸ್ಥೆಗೆ 2010ರ ಮಾರ್ಚ್ ಅಂತ್ಯದ ಕಂತಿನ ಮೊತ್ತ ರೂ. 80,71,756/–ಗಳನ್ನು (ಅಸಲು ರೂ. 62,50,000 + ಬಡ್ಡಿ ರೂ. 18,21,756) 2010ರ ಮಾರ್ಚ್ ಅಂತ್ಯದೊಳಗಾಗಿ ಪಾವತಿ ಮಾಡಬೇಕಾಗಿರುತ್ತದೆಂದು ತಿಳಿಸುತ್ತಾ, ಸದರಿ ಮೊತ್ತವನ್ನು ಬಿಡುಗಡೆ ಮಾಡಲು ಕೋರಲಾಗಿದೆ. ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಐಟಿಡಿ 07 ಪಿಆರ್‌ಎಂ 2009, ಬೆಂಗಳೂರು, ದಿನಾಂಕ: 1ನೇ ಫೆಬ್ರವರಿ 2010**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ, ಹುಡ್ಕೋ ಸಂಸ್ಥೆಗೆ ಅಸಲು ಮತ್ತು ಬಡ್ಡಿಯ ಬಾಬ್ತು ಪಾವತಿಸಲು ದಿನಾಂಕ 31–03–2010ರ ಅಂತ್ಯದ 21ನೇ ತ್ರೈಮಾಸಿಕ ಕಂತಿನ ಹಣ ರೂ. 80,71,756/–ಗಳ (ಎಂಬತ್ತು ಲಕ್ಷದ ಎಪ್ಪತ್ತೊಂದು ಸಾವಿರದ ಏಳನೂರಾ ಐವತ್ತಾರು ರೂಪಾಯಿಗಳು ಮಾತ್ರ) ಅನುದಾನವನ್ನು ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

ಸದರಿ ಅನುದಾನವನ್ನು ಆಡಳಿತಾಧಿಕಾರಿಗಳು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ ಇವರು, ನಿರ್ದೇಶಕರು ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ ಇವರ ಮೇಲು ಸಹಿ ಪಡೆದು ಖಜಾನೆಯಿಂದ ಸದರಿ ಅನುದಾನವನ್ನು ಡ್ರಾ ಮಾಡಿ ಅಪರ ವ್ಯವಸ್ಥಾಪಕ ನಿರ್ದೇಶಕರು, ಕೆಬಿಟ್ಸ್ ಸಂಸ್ಥೆ ಇವರಿಗೆ ವಿತರಿಸತಕ್ಕದ್ದು.

ಈ ವೆಚ್ಚವನ್ನು 2009–10ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ **'5465–01–190–1–08 (ಯೋಜನೇತರ) ಮಾಹಿತಿ ಬಾಂಡುಗಳು 240 ಸಾಲ ಮೇಲುಸ್ತುವಾರಿ'** ಇದರ ಅಡಿಯಲ್ಲಿ ಒದಗಣೆ ಮಾಡಲಾದ ಅನುದಾನದಿಂದ ಭರಿಸತಕ್ಕದ್ದು.

ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆ, ಇವರು ಸದರಿ ಅನುದಾನದ ಬಳಕೆಯ ಬಗ್ಗೆ ಕೆಬಿಟ್ಸ್ ಸಂಸ್ಥೆಯ ಅಪರ ವ್ಯವಸ್ಥಾಪಕ ನಿರ್ದೇಶಕರವರಿಂದ ಉಪಯೋಗಿತಾ ದೃಢೀಕರಣ ಪತ್ರವನ್ನು ಪಡೆದು ಸರ್ಕಾರಕ್ಕೆ ಒದಗಿಸತಕ್ಕದ್ದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ 16–5–2008 ಇದರನ್ವಯ ಆರ್ಥಿಕ ಇಲಾಖೆಯ ಸಹಮತಿಯನ್ನು ಪರಿಭಾವಿಸಿ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಎಂ. ವಿ. ಕೃಷ್ಣಮೂರ್ತಿ)**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 309 ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ.

**ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ**

**ವಿಷಯ :** ಹುಬ್ಬಳ್ಳಿಯಲ್ಲಿ ಆರ್ಯಭಟ್ಟ ಮಾಹಿತಿ ತಂತ್ರಜ್ಞಾನ ಉದ್ಯಾನದ ಅಭಿವೃದ್ಧಿಗಾಗಿ ಅನುದಾನ ಬಿಡುಗಡೆ ಮಾಡುವ ಬಗ್ಗೆ :–

**ಓದಲಾಗಿದೆ :** 1) ಸರ್ಕಾರಿ ಆದೇಶ ಸಂಖ್ಯೆ ಐಟಿಡಿ 25 ಎಂಡಿಎ 2008, ದಿನಾಂಕ 06–09–2008

2) ಸರ್ಕಾರಿ ಅದೇಶ ಸಂಖ್ಯೆ ಐಟಿಡಿ 25 ಎಂಡಿಎ 2008, ದಿನಾಂಕ 10–08–2009

3) ಆಯುಕ್ತರು, ಹುಬ್ಬಳ್ಳಿ–ಧಾರವಾಡ ಮಹಾನಗರ ಪಾಲಿಕೆರವರ ಪತ್ರ ಸಂಖ್ಯೆ ಹೆಚ್‌ಡಿಎಂಸಿ/100/02/469/09, ದಿನಾಂಕ 13–01–2010

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ದಿನಾಂಕ 6–9–2008ರ ಸರ್ಕಾರಿ ಆದೇಶದಲ್ಲಿ ಆಯುಕ್ತರು, ಹುಬ್ಬಳ್ಳಿ–ಧಾರವಾಡ ಮಹಾನಗರ ಪಾಲಿಕೆರವರಿಗೆ ಹುಬ್ಬಳ್ಳಿಯಲ್ಲಿ ಆರ್ಯಭಟ್ಟ ಮಾಹಿತಿ ತಂತ್ರಜ್ಞಾನ ಉದ್ಯಾನದ ಅಭಿವೃದ್ಧಿ ಯೋಜನೆಗೆ ರೂ. 1.00 ಕೋಟಿ ಅನುದಾನವನ್ನು ಪ್ರಥಮ ಕಂತಾಗಿ ಬಿಡುಗಡೆ ಮಾಡಲಾಗಿರುತ್ತದೆ.

ಮೇಲೆ (2)ರಲ್ಲಿ ಓದಲಾದ ದಿನಾಂಕ 10–08–2009ರ ಸರ್ಕಾರಿ ಆದೇಶದಲ್ಲಿ ಆಯುಕ್ತರು, ಹುಬ್ಬಳ್ಳಿ–ಧಾರವಾಡ ಮಹಾನಗರ ಪಾಲಿಕೆರವರಿಗೆ ಹುಬ್ಬಳ್ಳಿಯಲ್ಲಿ ಆರ್ಯಭಟ್ಟ ಮಾಹಿತಿ ತಂತ್ರಜ್ಞಾನ ಉದ್ಯಾನದ ಅಭಿವೃದ್ಧಿ ಯೋಜನೆಗೆ ರೂ. 1.00 ಕೋಟಿ ಅನುದಾನವನ್ನು ಬಿಡುಗಡೆ ಮಾಡಲಾಗಿರುತ್ತದೆ.

ಮೇಲೆ (3)ರಲ್ಲಿ ಓದಲಾದ ಆಯುಕ್ತರು, ಹುಬ್ಬಳ್ಳಿ–ಧಾರವಾಡ ಮಹಾನಗರ ಪಾಲಿಕೆರವರ ಪತ್ರದಲ್ಲಿ ಸರ್ಕಾರದ ವತಿಯಿಂದ ಬಿಡುಗಡೆ ಮಾಡಲಾದ ರೂ. 200.00 ಲಕ್ಷಗಳಲ್ಲಿ ರಸ್ತೆ ಕಾಮಗಾರಿಯನ್ನು ಕೈಗೆತ್ತಿಕೊಳ್ಳಲಾಗಿದ್ದು, ಉಳಿದಂತೆ ಆರ್ಯಭಟ ಐಟಿ ಪಾರ್ಕ್ ಅಭಿವೃದ್ಧಿಗೆ ಅಂದರೆ Land Scaping, LAN. WAN, Broad Band ಹಾಗೂ ಪಾರ್ಕ್‌ನಲ್ಲಿಯ ವಿದ್ಯುತ್ತೀಕರಣಕ್ಕಾಗಿ ರೂ. 286.00 ಲಕ್ಷ ಅನುದಾನವನ್ನು ಬಿಡುಗಡೆ ಮಾಡುವಂತೆ ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಆರ್ಯಭಟ ಮಾಹಿತಿ ತಂತ್ರಜ್ಞಾನ ಉದ್ಯಾನಕ್ಕೆ 2009–10ನೇ ಸಾಲಿನ ಆಯವ್ಯಯದಲ್ಲಿ ಒದಗಿಸಲಾಗಿರುವ ರೂ. 2.00 ಕೋಟಿಗಳ ಅನುದಾನದಲ್ಲಿ ಉಳಿದ ರೂ. 100 ಕೋಟಿ ಅನುದಾನ ಬಿಡುಗಡೆ ಮಾಡಲು ನಿರ್ಧರಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಮಾತಂಇ 25 ಎಂಡಿಎ 2008, ಬೆಂಗಳೂರು, ದಿನಾಂಕ 1ನೇ ಫೆಬ್ರವರಿ 2010**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ, ಆರ್ಯಭಟ ಮಾಹಿತಿ ತಂತ್ರಜ್ಞಾನ ಉದ್ಯಾನದ ಅಭಿವೃದ್ಧಿಗಾಗಿ 2009–10ನೇ ಸಾಲಿನ ಆಯವ್ಯಯದಲ್ಲಿ ಒದಗಿಸಲಾಗಿರುವ ರೂ. 2.00 ಕೋಟಿಗಳ ಅನುದಾನದಲ್ಲಿ ಉಳಿದ ರೂ. 1.00 ಕೋಟಿ ಅನುದಾನವನ್ನು (ಒಂದು ಕೋಟಿ ರೂಪಾಯಿಗಳು ಮಾತ್ರ) ಆಯುಕ್ತರು ಹುಬ್ಬಳ್ಳಿ–ಧಾರವಾಡ ಮಹಾನಗರ ಪಾಲಿಕೆರವರಿಗೆ ಹಂಚಿಕೆ ಮಾಡುವ ಸಲುವಾಗಿ ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆ ಇವರಿಗೆ ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿ ನೀಡಿದೆ.

ಸದರಿ ಅನುದಾನವನ್ನು ಆಡಳಿತಾಧಿಕಾರಿಗಳು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ ಇವರು, ನಿರ್ದೇಶಕರು ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ ಇವರ ಮೇಲು ಸಹಿ ಪಡೆದು ಖಜಾನೆಯಿಂದ ಸದರಿ ಅನುದಾನವನ್ನು ಡ್ರಾ ಮಾಡಿ ಆಯುಕ್ತರು, ಹುಬ್ಬಳ್ಳಿ–ಧಾರವಾಡ ಮಹಾನಗರ ಪಾಲಿಕೆಯವರಿಗೆ ವಿತರಿಸತಕ್ಕದ್ದು.

ಈ ವೆಚ್ಚವನ್ನು 2009–10ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ "5465–01–190–1–12 ಹುಬ್ಬಳ್ಳಿ ಆರ್ಯಭಟ ಮಾಹಿತಿ ತಂತ್ರಜ್ಞಾನ ಪಾರ್ಕ್ (ಯೋಜನೆ)" ಅಡಿಯಲ್ಲಿ ಪ್ರಸಕ್ತ ಸಾಲಿನಲ್ಲಿ ಒದಗಿಸಿರುವ ಅನುದಾನದಿಂದ ಭರಿಸತಕ್ಕದ್ದು. ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆ, ಇವರು ಅನುದಾನದ ಬಳಕೆಯ ಬಗ್ಗೆ ಆಯುಕ್ತರು, ಹುಬ್ಬಳ್ಳಿ–ಧಾರವಾಡ ಮಹಾನಗರ ಪಾಲಿಕೆಯವರಿಂದ ಉಪಯೋಗಿತಾ ದೃಢೀಕರಣ ಪತ್ರವನ್ನು ವೆಚ್ಚ ಮಾಡಿದ ಅನುದಾನದ ವಿವರಗಳ ಜೊತೆಗೆ ಪಡೆದು ಈ ಆರ್ಥಿಕ ವರ್ಷದೊಳಗಾಗಿ ಸರ್ಕಾರಕ್ಕೆ ಒದಗಿಸತಕ್ಕದ್ದು.

ಈ ಆದೇಶವನ್ನು ಟಿಪ್ಪಣಿ ಸಂಖ್ಯೆ ಆಇ 23 ವೆಚ್ಚ–2/2010, ದಿನಾಂಕ 29–1–2010ರಲ್ಲಿನ ಆರ್ಥಿಕ ಇಲಾಖೆಯ ಸಹಮತಿಯೊಂದಿಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಎಂ. ವಿ. ಕೃಷ್ಣಮೂರ್ತಿ)**

ಸರ್ಕಾರದ ಅಧೀನ ಕಾರ್ಯದರ್ಶಿ,

ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ.

ಪಿ.ಆರ್. 310

## ಇಂಧನ ಸಚಿವಾಲಯ

**ವಿಷಯ :** ಮೆ॥ ದೊಡ್ಡನವರ್ ಬ್ರದರ್ಸ್, ಇವರಿಗೆ 6.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆ ಹಂಚಿಕೆ ಬಗ್ಗೆ.

**ಓದಲಾಗಿದೆ :** 1. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ ಕೆ.ಆರ್.ಇ.ಡಿ./08/ಡಿಬಿ/2009/929, ದಿನಾಂಕ 18/21–2–2009.

2. ದಿನಾಂಕ 23–10–2009 ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ॥ ದೊಡ್ಡನವರ್ ಬ್ರದರ್ಸ್ ಇವರಿಗೆ ಬೆಳಗಾಂ ಜಿಲ್ಲೆಯಲ್ಲಿ 6.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಹಂಚಿಕೆ ಸಮಿತಿ ಸಭೆಯ ಮುಂದೆ ಸದರಿ ಪ್ರಸ್ತಾವನೆಯನ್ನು ಮಂಡಿಸಲಾಗಿತ್ತು. ಮೆ॥ ದೊಡ್ಡನವರ್ ಬ್ರದರ್ಸ್, ಇವರಿಗೆ 6.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲು ಹಂಚಿಕೆ ಸಮಿತಿಯು ಪರಿಗಣಿಸಿರುತ್ತದೆ. ಆದುದರಿಂದ ಈ ಕೆಳಗಿನಂತೆ ಆದೇಶಿಸಲಾಗಿದೆ.–

**ಸರ್ಕಾರದ ಆದೇಶ ಸಂಖ್ಯೆ ಇಎನ್ 93 ಎನ್‌ಸಿಇ 2009, ಬೆಂಗಳೂರು, ದಿನಾಂಕ 4ನೇ ಫೆಬ್ರವರಿ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಮೆ॥ ದೊಡ್ಡನವರ್ ಬ್ರದರ್ಸ್ ಇವರಿಗೆ ಬೆಳಗಾಂ ಜಿಲ್ಲೆಯಲ್ಲಿ 6.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಈ ಕೆಳಗೆ ವಿವರಿಸಿರುವಂತೆ ಈ ಆದೇಶದಲ್ಲಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಿದೆ :–

| Topo sheet No. | Proposed capacity MW | Near by villages of the proposed area and district | Geographical ea description of the project |
|---|---|---|---|
| 47L/11 | 6MW | Thoranahalli and Karosi Belgaum District | The proposed location is a combination of plain and non plain located on the S-W of Chikkodi Town at about 6 kms. It appears to be non-forest land and completely open type. The elevation of the site very from 700 to 720 mtrs.<br>The area is held in the following Geographical co-ordinates.<br>**Latitude :** 16°22’49’’ - 16°23’49’’N<br>**Longitude :** 74°31’49’’ - 74°34’29’’E<br>**Ridge peaks :** Elevation varies from 700 to 720 mtrs Amsl |

1. ಸದರಿ ಯೋಜನೆಯನ್ನು financial closure ಸಾಧಿಸಿದ 24 ತಿಂಗಳುಗಳ ಒಳಗಾಗಿ ಪ್ರಾರಂಭ ಮಾಡತಕ್ಕದ್ದು.
2. ಈ ಆದೇಶ ಹೊರಡಿಸಿದ ದಿನಾಂಕದಿಂದ 45 ದಿನಗಳೊಳಗಾಗಿ ಯೋಜನಾಭಿವೃದ್ಧಿದಾರರು ರೂ.400ರ ಛಾಪಾ ಕಾಗದದಲ್ಲಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳುವುದು. ತಪ್ಪಿದಲ್ಲಿ ಈ ಹಂಚಿಕೆ ಆದೇಶ ತಂತಾನೆ ರದ್ದಾಗಿದೆ ಎಂದು ಭಾವಿಸುವುದು.
3. ಹಂಚಿಕೆದಾರರು ಪೂರ್ತಿ ಒಂದು ಪವನ ವರ್ಷಕ್ಕೆ ಕಡಿಮೆ ಇಲ್ಲದಂತೆ 10 ಮೀಟರ್ ಮತ್ತು ಹಬ್ ಹೈಟ್ ಮಟ್ಟದಲ್ಲಿ ಪವನ ವೇಗದ ಅಳತೆಯನ್ನು ಮಾಡಿಕೊಳ್ಳಬೇಕು. ಅಲ್ಲದೇ, ಕಾಲ ಕಾಲಕ್ಕೆ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದಿಂದ ಹೊರಡಿಸತಕ್ಕ ಮಾರ್ಗಸೂಚಿಗಳಿಗನುಗುಣವಾಗಿ ಮೈಕ್ರೊ ಸೈಟಿಂಗ್ ಮಾಡಿರುವ ಅಂಶಗಳನ್ನೊಳಗೊಂಡ ವಿವರವಾದ ಯೋಜನಾ ವರದಿಗಳ 3 ಪ್ರತಿಗಳನ್ನು ತಯಾರಿಸಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಮಂಡಿಸಬೇಕು. ತಾಂತ್ರಿಕ ಅವಶ್ಯಕತೆ ಮತ್ತು ಹೆಚ್ಚಿನ ವಿದ್ಯುತ್ ಉತ್ಪಾದನೆಯನ್ನು ಸೇಫ್‌ನಕ್ಷೆ ಮತ್ತು ವಿಂಡ್ ಫಾರ್ಮನ ಲೇಔಟ್‌ನ

ಬದಲಾವಣೆಗನುಗುಣವಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ಶಿಫಾರಸ್ಸಿನಂತೆ ಇದೆ ಎಂಬುದನ್ನು ಖಾತರಿ ಪಡಿಸಬೇಕು.

4. ಗಾಳಿ ಚಕ್ರದ ಹಬ್ ಹೈಟಿನಲ್ಲಿ ಪವನ ವೇಗದ ಅಳತೆ ಖಾತರಿಪಡಿಸಲು ಕೆಳಗಿನ ಕೋಷ್ಟಕದಲ್ಲಿ ವಿವರಿಸಿರುವಂತೆ ಪ್ರತಿ 5 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಗೆ ಒಂದರಂತೆ ಗಾಳಿ ಕಂಬವನ್ನು (ವಿಂಡ್ ಮಾಸ್ಟ್) ಅಳವಡಿಸಬೇಕು. ಅಳತೆ ವಿವರಗಳನ್ನು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸಲ್ಲಿಸುವುದು.

| ಗಾಳಿ ಶಕ್ತಿ ವಿದ್ಯುತ್ತಿನ ದೂರ ಸಾಮರ್ಥ್ಯ | 5 ಮೆಗಾವ್ಯಾಟ್ ಯೋಜನೆಯಲ್ಲಿ ಸಾಧಾರಣ ಗಾಳಿ ಶಕ್ತಿ ವಿದ್ಯುತ್ತಿನ ಸಂಖ್ಯೆ | ಹಾಕಬೇಕಾಗಿರುವ ಗಾಳಿ ಕಂಬ (ವಿಂಡ್ ಮಾಸ್ಟ್‌ಗಳ ಸಂಖ್ಯೆ) |
|---|---|---|
| ➢ 200 ಕಿ.ವ್ಯಾ. ನಿಂದ 300 ಕಿ.ವ್ಯಾ. | 18 | 1 |
| ➢ 300 ಕಿ.ವ್ಯಾ. ನಿಂದ 500 ಕಿ.ವ್ಯಾ. | 15 | 1 |
| ➢ 500 ಕಿ.ವ್ಯಾ. ನಿಂದ 750 ಕಿ.ವ್ಯಾ. | 12 | 1 |
| ➢ 750 ಕಿ.ವ್ಯಾ. ನಿಂದ 1000 ಕಿ.ವ್ಯಾ. | 8 ರಿಂದ 10 | 1 |

5. ಯೋಜನೆಯ ವಿವಿಧ ಹಂತದ ಚಟುವಟಿಕೆಗಳು ಹಾಗೂ ಯೋಜನೆಗಳಿಂದ ಪ್ರಾರಂಭದ ಹಂತದ ತನಕ ವಿವಿಧ ಮೈಲುಗಲ್ಲುಗಳನ್ನು ತೋರಿಸುವ ಪರ್ಟ್ ನಕ್ಷೆಯನ್ನು ತಯಾರಿಸಿ ಮೇಲುಸ್ತುವಾರಿವಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸಲ್ಲಿಸಬೇಕು.

6. ಎಲ್ಲೆಲ್ಲಿ ಶಾಸನಬದ್ಧ ಅನುಮೋದನೆ ಅವಶ್ಯಕತೆಯಿದೆಯೋ ಅಂದರೆ ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ/ಕಂದಾಯ/ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆಗಳ ಮತ್ತು ಇತರ ಸಂಬಂಧಿತ ಇಲಾಖೆಗಳಿಂದ ಅನುಮೋದನೆಯನ್ನು ಹಂಚಿಕೆದಾರರು ಪಡೆದುಕೊಳ್ಳತಕ್ಕದ್ದು.

7. ಅಭಿವೃದ್ಧಿದಾರರು ಸಂಬಂಧಿಸಿದ ವಿದ್ಯುತ್ ಸರಬರಾಜು ಕಂಪನಿಯೊಂದಿಗೆ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂತಿಗೆ ನೀತಿ ನಿಯಮಗಳಿಗನುಗುಣವಾಗಿ ವೀಲಿಂಗ್ ಮತ್ತು ಬ್ಯಾಂಕಿಂಗ್/ವಿದ್ಯುತ್ ಖರೀದಿ ಒಡಂಬಡಿಕೆ ಮಾಡಿಕೊಳ್ಳಲು ಅನುಮತಿಸಲಾಗಿದೆ.

8. ಕಾಲಕಾಲಕ್ಕೆ ಇರುವ ನೀತಿ ನಿಯಮಗಳಿಗೆ ಅನುಗುಣವಾಗಿ ಯಂತ್ರೋಪಕರಣಗಳಿಗೆ ಪ್ರವೇಶ ತೆರಿಗೆಯಿಂದ ವಿನಾಯಿತಿ ನೀಡಲಾಗಿದೆ.

9. ಯೋಜನೆಯನ್ನು ತ್ವರಿತವಾಗಿ ಅನುಷ್ಠಾನ ಮಾಡಲು ಅನುವಾಗುವಂತೆ ರಾಜ್ಯ ಮತ್ತು ಜಿಲ್ಲಾ ಮಟ್ಟದ ಸರ್ಕಾರಿ ಅಧಿಕಾರಿಗಳು ಸಹಕರಿಸುವುದು.

10. ಸದರಿ ಪವನ ವಿದ್ಯುತ್ ಯೋಜನೆಗಾಗಿ ಇಂಧನ ಇಲಾಖೆಯಿಂದ ಜಮೀನನ್ನು ಹಂಚಿಕೆ ಮಾಡಲಾಗುವುದಿಲ್ಲ ಹಾಗೂ ಈ ಹಂಚಿಕೆ ಆದೇಶವು ಪವನ ವಿದ್ಯುತ್ ಯೋಜನೆಯ ಸಾಮರ್ಥ್ಯದ ಹಂಚಿಕೆ ಮಾತ್ರ ಸೀಮಿತವಾಗಿದೆ ಹಾಗೂ ಅಭಿವೃದ್ಧಿದಾರರಿಗೆ ಯೋಜನೆಯ ಜಾಗದಲ್ಲಿಯ ಖನಿಜ ಸಂಪತ್ತು ಹಾಗೂ ಭೂಮಿಯ ಬಗ್ಗೆ ಯಾವುದೇ ಹಕ್ಕು ಇರುವುದಿಲ್ಲ ಎಂಬುದನ್ನು ಮನಗಾಣತಕ್ಕದ್ದು.

11. ಸದರಿ ಆದೇಶವನ್ನು ರದ್ದುಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಜಿ. ಸಂಪತ್ ಕುಮಾರ್,**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

ಪಿ.ಆರ್.401

## ಇಂಧನ ಸಚಿವಾಲಯ

**ವಿಷಯ :** M/s. OM Shakthi Power Producers ಇವರಿಗೆ 5.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವ ಬಗ್ಗೆ.

**ಓದಲಾಗಿದೆ :** 1. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ ಕೆ.ಆರ್.ಇ.ಡಿ./06/ಓಂ ಶಕ್ತಿ/09/2014, ದಿನಾಂಕ 19/22–6–2009.

2. ದಿನಾಂಕ 23–10–2009 ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು M/s. OM Shakthi Power Producers ಇವರಿಗೆ ಹಾಸನ ಜಿಲ್ಲೆಯ ಸಕಲೇಶಪುರ ತಾಲ್ಲೂಕಿನ ಭೀಮನ್‌ಕಲ್ ಗ್ರಾಮದ ಬೆಟ್ಟಕುಮಾರಿ ಹೊಳೆಗೆ ಅಡ್ಡಲಾಗಿ 5.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಕಳುಹಿಸಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ನಡವಳಿಯ ಪ್ರಕಾರ ದಿನಾಂಕ 23–10–2009 ರಂದು ಜರುಗಿದ ಹಂಚಿಕೆ ಸಮಿತಿ ಸಭೆಯ ಮುಂದೆ ಸದರಿ ಪ್ರಸ್ತಾವನೆಯನ್ನು ಮಂಡಿಸಲಾಗಿತ್ತು. M/s. OM Shakthi Power Producers ಇವರಿಗೆ 5.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲು ಹಂಚಿಕೆ ಸಮಿತಿಯ ನಿರ್ಣಯದ ಉದ್ಧೃತ ಭಾಗವನ್ನು ಈ ಕೆಳಗೆ ನೀಡಲಾಗಿದೆ :–

a) Energy Department had directed KREDL to have a detailed Survey and investigation conducted on the proposal of M/s. Om Shakthi for the 5 MW project in Bhimankal village, Sakleshpur Taluk to find out whether this proposal `overlaps', `conflicts' or `clashes' with KPCL Bettakumari Dam.

b) The Allotment Committee considered the report prepared by KPCL bearing No.CEITA/MHS, 1366 dated 23-10-2009 from the Managing Director, KPCL to KREDL with a copy to Principal Secretary to Government, Energy Department. The Report, following an inspection of the proposed location, provides details of the latitude and longitude of the location along with other particulars relating to the location of the weir by M/s. Om Shakthi Power Private Limited and the proposed Bettakumari Dam. The report mentions :

``the proposal M/s. Om Shakthi Power Private Limited is not overlapping or clashing with the location of KPCL Bettakumari Dam.

c) The Report also indicates that the revised proposal of Om Shakthi Power Project Limited does not overlap or interfere with that of M/s. Trimurthi Power Project Private Limited.

d) The Managing Director, while forwarding the report, indicated that since the proposed project is very close to the Bettakumari Dam, KPCL has objected to it. The report itself clearly established that there is <u>neither overlap or clash nor does it interfere with the KPCL project in any manner.</u>

e) Under the circumstances, the Allotment Committee recommends the 5 MW Project for allotment to M/s. Om Shakthi Power Private Limited at the revised location subject to the following conditions :

i. The weir should be located at a distance of not less than 750 Mtrs. On the downstream of the toe of the proposed KPCL dam across Bettakumari.

ii. The FRL of the crest should be 10 mtrs. Down stream of the toe of the proposed KPCL Dam. The FRL/Crest of the weir should be below EL 360 Mtrs.

iii. On the construction of the Bettakumari Dam by KPCL, the independent catchment area for M/s. Om Shakthi Power Private Limited's Project will be reduced considerably. In such an event,

iv. The company will have no right to claim any compensation from the Government, KPCL or from any aurhority.

v. The minimum tail water level for the Om Shakthi Power Project should be at least one meter above the MWL of the proposed weir on the downstream by M/s Trimurthi Power Private Limited.

vi. M/s. Om Shakthi Power Private Limited should furnish in writing before the commencement of the project that they are aware of the proposed dam across Bettakumari by KPCL, also of its ramifications, including reduced water management for this project.

vii. They shall also give in writing that they will have no claim what so every by KPCL activities.

ಹಂಚಿಕೆ ಸಮಿತಿ ಸಭೆಯ ನಿರ್ಣಯದ ಹಿನ್ನೆಲೆಯಲ್ಲಿ, ಈ ಕೆಳಗಿನಂತೆ ಆದೇಶ ಹೊರಡಿಸಿದೆ :–

**ಸರ್ಕಾರದ ಆದೇಶ ಸಂಖ್ಯೆ ಇಎನ್ 143 ಎನ್‌ಸಿಇ 2007, ಬೆಂಗಳೂರು, ದಿನಾಂಕ 5ನೇ ಫೆಬ್ರವರಿ 2010**

M/s. OM Shakthi Power Producers ಇವರಿಗೆ ಹಾಸನ ಜಿಲ್ಲೆಯ ಸಕಲೇಶಪುರ ತಾಲ್ಲೂಕಿನ ಭೀಮನ್‌ಕಲ್ ಗ್ರಾಮದ ಬೆಟ್ಟಕುಮೇರಿ ನದಿಗೆ ಅಡ್ಡಲಾಗಿ 5.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು (**Weir Latitude :** 12°46'50" **Longitude :** 75°40'56" Power House - **Latitude :** 12°44'52" **Longitude :** 75°40'56") ಈ ಕೆಳಗಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿದೆ :–

1 (ಅ) ಸದರಿ ಯೋಜನೆಯಿಂದ ಕೆಳತೊರೆ ಮತ್ತು ಮೇಲ್ತೊರೆ ಯೋಜನೆಗಳಿಗೆ ಯಾವುದೇ ಹಾನಿಯಾಗಬಾರದು.

(ಆ) ಹಂಚಿಕೆದಾರರು ಈ ಆದೇಶ ಹೊರಡಿಸಿದ 45 ದಿನಗಳ ಒಳಗಾಗಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳತಕ್ಕದ್ದು. ಇಲ್ಲದಿದ್ದಲ್ಲಿ, ಈ ಹಂಚಿಕೆ ತಂತಾನೇ ರದ್ದಾಗುವುದು. ನಂತರ, ಕಂಪನಿಯು ಹಂಚಿಕೆಗೊಸ್ಕರ ಪುನಃ ಹೊಸದಾಗಿ ಅರ್ಜಿ ಸಲ್ಲಿಸತಕ್ಕದ್ದು. ಯಾವ ಕಾರಣಕ್ಕೂ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಸ್ವೀಕರಿಸಿದ ಅರ್ಜಿ ಪರಿಷ್ಕರಣಾ ಶುಲ್ಕವನ್ನು ಹಿಂದಿರುಗಿಸಲಾಗುವುದಿಲ್ಲ.

(ಇ) ಒಡಂಬಡಿಕೆಯನ್ನು ರೂ.400.00 ರ ಛಾಪಾ ಕಾಗದದ ಮೇಲೆ ಮಾಡಿಕೊಂಡು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದವರಿಗೆ ಕಳುಹಿಸಿ ಪ್ರಮಾಣೀಕರಿಸಿ ಸರ್ಕಾರಕ್ಕೆ ಕಳುಹಿಸಿಕೊಡತಕ್ಕದ್ದು.

(ಈ) ಈ ಒಡಂಬಡಿಕೆಯನ್ನು ಮಾಡಿಕೊಳ್ಳುವ ಮೊದಲು ಯೋಜನಾ ಅಭಿವೃದ್ಧಿದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ವಿವರವಾದ ಯೋಜನಾ ವರದಿಯನ್ನು (ಡಿ.ಪಿ.ಆರ್.) ಪರಿಷ್ಕರಿಸಲು ಮೆಗಾವಾಟ್ ಒಂದಕ್ಕೆ ಸರ್ಕಾರದ ಆದೇಶಾನುಸಾರ ವಿವರವಾದ ಯೋಜನಾ ವರದಿ ಪರಿಷ್ಕರಣ ಶುಲ್ಕವನ್ನು ತುಂಬುವುದು.

2 (ಅ) ಯೋಜನಾ ಅಭಿವೃದ್ಧಿದಾರರು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದಲೂ ಅಂದರೆ ಜಲಸಂಪನ್ಮೂಲ ಇಲಾಖೆ, ಅರಣ್ಯ, ಜೀವಿಶಾಸ್ತ್ರ ಮತ್ತು ಪರಿಸರ ಇಲಾಖೆ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಮತ್ತು ಕಂದಾಯ ಇಲಾಖೆಗಳಿಂದ ಕ್ಲಿಯರೆನ್ಸ್‌ಗಾಗಿ ಅರ್ಜಿ ಸಲ್ಲಿಸತಕ್ಕದ್ದು. ಒಡಂಬಡಿಕೆ ಮಾಡಿಕೊಂಡ ಒಂದು ವರ್ಷದೊಳಗಾಗಿ ವಿವರವಾದ ಯೋಜನಾ ವರದಿಯನ್ನು ಸಲ್ಲಿಸತಕ್ಕದ್ದು.

(ಆ) ಹಂಚಿಕೆದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಠೇವಣಿ ಇಡುವ ಹಣವನ್ನು, ವಿವರವಾದ ಯೋಜನಾ ವರದಿಯನ್ನು (ಡಿ.ಪಿ.ಆರ್.) ಆವಿಷ್ಕರಿಸುವುದಕೋಸ್ಕರ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.

3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಯೋಜನಾ ವರದಿಗೆ ತಾಂತ್ರಿಕ ಅನುಮೋದನೆ ಕೊಟ್ಟ ಆರು ತಿಂಗಳ ಒಳಗಾಗಿ ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸತಕ್ಕದ್ದು.

4. ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸಿದ 24 ತಿಂಗಳ ಒಳಗಾಗಿ ಯೋಜನೆಯನ್ನು ಮುಗಿಸುವ ನಿಟ್ಟಿನಲ್ಲಿ ಹಂಚಿಕೆದಾರರು ಕಾರ್ಯಪ್ರವೃತ್ತರಾಗತಕ್ಕದ್ದು.

5. ಮೇಲೆ ತಿಳಿಸಿದ 2, 3 ಮತ್ತು 4 ಅಂಶಗಳ ಯೋಜನಾ ಅನುಷ್ಠಾನ ಮಾಡಲು ಸಫಲವಾಗದಿದ್ದಲ್ಲಿ ಈ ಹಂಚಿಕೆಯು ತಂತಾನೇ ಯಾವ ಮುನ್ಸೂಚನೆಯನ್ನೂ ನೀಡದೆ ರದ್ದಾಗುವುದೆಂದು ತಿಳಿಯತಕ್ಕದ್ದು.

6. ಯೋಜನಾ ಅಭಿವೃದ್ಧಿದಾರರು ವಿದ್ಯುತ್ತನ್ನು ಮೂರನೆಯವರಿಗೆ ಮಾರಾಟ ಮಾಡುವ ಸಂದರ್ಭದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ವೀಲಿಂಗ್ ಅಂಡ್ ಬ್ಯಾಂಕಿಂಗ್ ಒಡಂಬಡಿಕೆ ಮಾಡಿಕೊಳ್ಳಲು ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವಿದ್ಯುತ್ತನ್ನು ಮಾರಾಟ ಮಾಡುವ ಸಂದರ್ಭದಲ್ಲಿ ವಿದ್ಯುತ್ ಖರೀದಿ ಒದಂಬಡಿಕೆ (ಪಿ.ಪಿ.ಎ.) ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.

7. ಈ ವಿಷಯದಲ್ಲಿ ಹಂಚಿಕೆದಾರರು ರಾಜ್ಯ ಮತ್ತು ಜಿಲ್ಲಾ ಮಟ್ಟಕ್ಕೆ ಸಂಬಂಧಿಸಿದ ಅಧಿಕಾರಿಗಳ ಸಹಾಯ/ಸಹಕಾರವನ್ನು ಪಡೆದು ನಿಗದಿತ ಅವಧಿಯೊಳಗೆ ಯೋಜನಾ ಅನುಷ್ಠಾನ ಪೂರ್ಣಗೊಳಿಸತಕ್ಕದ್ದು.

8. ಈ ಕಿರು ಜಲ ವಿದ್ಯುತ್ ಯೋಜನೆಯ ಸ್ಥಳದಲ್ಲಿ ಯಾವುದಾದರೂ ಸರ್ಕಾರಿ ಜಲ ವಿದ್ಯುತ್/ನೀರಾವರಿ ಕುಡಿಯುವ ನೀರಿನ ಯೋಜನೆಗಳು ಬಂದಲ್ಲಿ ಸರ್ಕಾರಿ ಯೋಜನೆಗಳಿಗೆ ಮೊದಲ ಆದ್ಯತೆ ದೊರಕುವುದು ಹಾಗೂ ಈ ಯೋಜನೆಗೆ ಯಾವುದಾದರೂ ಇತರೆ ಯೋಜನೆಗಳಿಂದ ಧಕ್ಕೆಯಾದಲ್ಲಿ ಯಾವುದೇ ಪರಿಹಾರವನ್ನು ಅಭಿವೃದ್ಧಿದಾರರು ನಿರೀಕ್ಷಿಸುವಂತಿಲ್ಲ.

9. ಸ್ಥಳೀಯವಾಗಿ ಉದ್ಭವಿಸುವ ಯಾವುದಾದರೂ ಆಕ್ಷೇಪಣೆಗಳಿಗೆ ಅಭಿವೃದ್ಧಿದಾರರೇ ಸಂಪೂರ್ಣವಾಗಿ ಹೊಣೆಗಾರರಾಗಿರುತ್ತಾರೆ.

10. ಕರ್ನಾಟಕ ವಿದ್ಯುತ್ ನಿಗಮ ನಿಯಮಿತದ ಯಾವುದೇ ಯೋಜನೆಗಳಿಂದಾಗಿ ಸದರಿ ಯೋಜನೆಯು ಮುಳುಗಡೆಯಾದಲ್ಲಿ, ಒದಗಬಹುದಾದ ಸಂಪೂರ್ಣ ತೊಂದರೆಗಳಿಗೆ ಅಭಿವೃದ್ಧಿದಾರರೇ ಪೂರ್ಣ ಜವಾಬ್ದಾರರಾಗಿರುತ್ತಾರೆ.

11. ಸದರಿ ಆದೇಶವನ್ನು ರದ್ದುಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

12. ಡಿ.ಪಿ.ಆರ್. ತಯಾರು ಮಾಡಿದ ಮೇಲೆ ಕ್ರೆಡಲ್ ಸಂಸ್ಥೆಯು ಪರಿಶೀಲಿಸಿದ ನಂತರ ಇತರ ಸಂಬಂಧಿಸಿದ ಇಲಾಖೆಗಳಿಗೆ ಡಿ.ಪಿ.ಆರ್. ಸಲ್ಲಿಸುವುದು ಹಾಗೂ ತದನಂತರ ತಾಂತ್ರಿಕ ಅನುಮೋದನೆಗಾಗಿ ಕ್ರೆಡಲ್‌ಗೆ ಅರ್ಜಿ ಸಲ್ಲಿಸತಕ್ಕದ್ದು.

13. The weir should be located at a distance of not less than 750 Mtrs. On the downstream of the toe of the proposed KPCL dam across Bettakumari.

14. The FRL of the crest should be 10 mtrs.Down stream of the toe of the proposed KPCL Dam. The FRL/Crest of the weir should be below EL 360 Mtrs.

15. On the construction of the Bettakumari Dam by KPCL, the independent catchment area for M/s. Om Shakthi Power Private Limited's Project will be reduced considerably. In such an event, the company will have no right to claim any compensation from the Government, KPCL or from any aurhority.

16. The minimum tall water level for the Om Shakthi Power Project should be at least one meter above the MWL of the proposed weir on the downstream by M/s Trimurthi Power Private Limited.

17. M/s. Om Shakthi Power Private Limited should furnish in writing before the commencement of the project that they are aware of the proposed dam across Bettakumari by KPCL, also of its ramifications, including reduced water management for this project.

18. The Company shall also give in writing that they will have no claim what so ever by KPCL activities.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್.ಜಿ. ಸಂಪತ್ ಕುಮಾರ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

ಪಿ.ಆರ್.402

## ಸಮಾಜ ಕಲ್ಯಾಣ ಸಚಿವಾಲಯ

**ವಿಷಯ :** ಗಂಗಾ ಕಲ್ಯಾಣ ಯೋಜನೆ ಅನುಷ್ಠಾನಗೊಳಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರಿ ಆದೇಶ ಸಂಖ್ಯೆ : ಸಕಇ 48 ಎಸ್‌ಡಿಸಿ 2008, ದಿನಾಂಕ 16–07–2009.
2. ಸರ್ಕಾರಿ ಆದೇಶ ಸಂಖ್ಯೆ : ಸಕಇ 118 ಎಸ್‌ಡಿಸಿ 2009, ದಿನಾಂಕ 18–08–2009.

**ಪ್ರಸ್ತಾವನೆ :**

ರಾಜ್ಯದಲ್ಲಿ ಗಂಗಾ ಕಲ್ಯಾಣ ಯೋಜನೆಯನ್ನು ಟರ್ನ್ ಕೀ ಆಧಾರದ ಮೇಲೆ ಅನುಷ್ಠಾನಗೊಳಿಸಲು ಮೇಲೆ ಓದಲಾದ ಆದೇಶಗಳಲ್ಲಿ ಮಂಜೂರಾತಿ ನೀಡಲಾಗಿದೆ. ಯೋಜನೆಯ ಅನುಷ್ಠಾನದ ವಿವರಗಳು ಸೇರಿದಂತೆ ಉಲ್ಲೇಖಿತ ಯೋಜನೆ ಅಡಿ ಟೆಂಡರ್ ಕರೆಯುವಲ್ಲಿ ತಾಂತ್ರಿಕ ಬಿಡ್ ಹಾಗೂ ಆರ್ಥಿಕ ಬಿಡ್‌ನಲ್ಲಿ ನಮೂದಿಸಬಹುದಾದ ಷರತ್ತುಗಳಲ್ಲದೆ ಟೆಂಡರ್ ಆಹ್ವಾನಿಸುವ ಪ್ರಾಧಿಕಾರ, ಟೆಂಡರ್ ಪರಿಶೀಲಿಸುವ ಪ್ರಾಧಿಕಾರ ಹಾಗೂ ಟೆಂಡರ್ ಅಂಗೀಕರಿಸುವ ಪ್ರಾಧಿಕಾರಗಳನ್ನು ನೇಮಿಸಲಾಗಿತ್ತು. ಆದರೆ ಟರ್ನ್ ಕೀ ಆಧಾರದ ಮೇಲೆ ಟೆಂಡರ್‌ಗಳನ್ನು ಆಹ್ವಾನಿಸಲಾಗಿ ಪ್ರತಿಕ್ರಿಯೆ ನೀರಸವಾಗಿರುತ್ತದೆ. ಆದಕಾರಣ ಸದರಿ ವಿಷಯವನ್ನು ಸರ್ಕಾರವು ಪುನಃ ಪರಿಶೀಲಿಸಿದ ನಂತರ ಗಂಗಾ ಕಲ್ಯಾಣ ಯೋಜನೆಯನ್ನು ಟರ್ನ್ ಕೀ ಆಧಾರದ ಮೇಲೆ ಅನುಷ್ಠಾನಗೊಳಿಸುವ ಬದಲು ಈ ಹಿಂದೆ ಇದ್ದ ಪದ್ಧತಿಯಲ್ಲೇ ಮುಂದುವರೆಸಲು ನಿರ್ಧರಿಸಲಾಗಿದೆ.

ಈ ಹಿನ್ನೆಲೆಯಲ್ಲಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಕಇ 18 ಎಸ್‌ಡಿಸಿ 2010, ಬೆಂಗಳೂರು, ದಿನಾಂಕ 28ನೇ ಜನವರಿ 2010**

ಗಂಗಾ ಕಲ್ಯಾಣ ಯೋಜನೆಯನ್ನು ಟರ್ನ್ ಕೀ ಆಧಾರದ ಮೇಲೆ ಅನುಷ್ಠಾನಗೊಳಿಸಲು ಹೊರಡಿಸಿದ ದಿನಾಂಕ 16.07.2009ರ ಆದೇಶವನ್ನು ಭಾಗಶಃ ಮಾರ್ಪಡಿಸಿ ದಿನಾಂಕ 18–08–2009ರ ಆದೇಶ ರದ್ದುಗೊಳಿಸಿ ಉಲ್ಲೇಖಿತ ಯೋಜನೆಯನ್ನು ಈ ಕೆಳಗಿನ ಷರತ್ತುಗಳಿಗೊಳಪಟ್ಟು ಅನುಷ್ಠಾನಗೊಳಿಸಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

1) ಗಂಗಾ ಕಲ್ಯಾಣ ಯೋಜನೆಯಡಿ ನಾಲ್ಕು ನಿಗಮಗಳ ಪರವಾಗಿ ರಾಜ್ಯ ಮಟ್ಟದಲ್ಲಿ ಜಿಲ್ಲೇವಾರು ಟೆಂಡರ್‌ಗಳನ್ನು ಡಾ॥ ಬಿ.ಆರ್. ಅಂಬೇಡ್ಕರ್ ಅಭಿವೃದ್ಧಿ ನಿಗಮದ ವ್ಯವಸ್ಥಾಪಕ ನಿರ್ದೇಶಕರು ಕರೆಯುವುದು.

2) ಈ ಯೋಜನೆಯಡಿ ಕೊಳವೆ ಬಾವಿಗಳನ್ನು "ನೀರಿಲ್ಲದಿದ್ದರೆ ಹಣವಿಲ್ಲ" (no water no money) ಎಂಬುದರ ಆಧಾರದ ಮೇಲೆ ಕೊರೆಯಬೇಕಾಗಿರುತ್ತದೆ.

3) ಅಂತಹ ಟೆಂಡರ್‌ಗಳನ್ನು ಇ–ಟೆಂಡರ್ ಮೂಲಕ ಆಹ್ವಾನಿಸುವುದು.

4) ಒಬ್ಬ ಟೆಂಡರ್‌ದಾರರು ಗರಿಷ್ಠ 3 ಜಿಲ್ಲೆಗಳಿಗೆ ಟೆಂಡರ್ ಸಲ್ಲಿಸಬಹುದಾಗಿರುತ್ತದೆ.

5) ಟೆಂಡರ್‌ದಾರರು 3 ರಿಗ್‌ಗಳನ್ನು ಸ್ವಂತವಾಗಿ ಅಥವಾ ಲೀಜ್ ಆಧಾರದ ಮೇಲೆ ಹೊಂದಿರಬೇಕು.

6) ಪ್ರತಿ ಜಿಲ್ಲೆಗೆ ಪ್ರತ್ಯೇಕವಾಗಿ ರಿಗ್‌ಗಳ ನೊಂದಣಿ ಸಂಖ್ಯೆಯನ್ನು ನಮೂದಿಸಿ ಟೆಂಡರ್ ಸಲ್ಲಿಸಬೇಕಾಗಿದೆ. ಅಂದರೆ ಟೆಂಡರ್‌ದಾರರು ಒಂದು ಜಿಲ್ಲೆಗಿಂತ ಹೆಚ್ಚಿನ ಜಿಲ್ಲೆಗಳಿಗೆ ಭಾಗವಹಿಸಲು ಇಚ್ಛಿಸಿದಲ್ಲಿ ಒಂದು ಜಿಲ್ಲೆಯಲ್ಲಿ ನಮೂದಿಸಿದ ರಿಗ್‌ಗಳ ನೋಂದಣಿ ಸಂಖ್ಯೆಗಳನ್ನು ಬೇರೆ ಜಿಲ್ಲೆಗಳಲ್ಲಿ ಸಲ್ಲಿಸಿದ ಟೆಂಡರ್‌ನಲ್ಲಿ ನಮೂದಿಸಬಾರದು.

7) ಕಳೆದ ಮೂರು ವರ್ಷಗಳಲ್ಲಿ ಯಾವುದಾದರೂ ಒಂದು ವರ್ಷದಲ್ಲಿ ಟೆಂಡರ್‌ದಾರರ ವಾರ್ಷಿಕ ವಹಿವಾಟು ಕನಿಷ್ಟ ರೂ.50.00 ಲಕ್ಷಗಳು ಇರಬೇಕು. ಇದಕ್ಕೆ ಪೂರಕವಾಗಿ ಚಾರ್ಟರ್ಡ್ ಅಕೌಂಟೆಂಟ್ ಇವರು ದೃಢೀಕರಿಸಿದ balance sheet, profit & loss account ಸಲ್ಲಿಸಬೇಕು.

8) ಟೆಂಡರ್‌ದಾರರು ಇತ್ತೀಚೆಗೆ ಸಲ್ಲಿಸಿದ Income tax returns ಹಾಗೂ Income tax department ನ ಸ್ವೀಕೃತಿಯೊಂದಿಗೆ ಸಲ್ಲಿಸಬೇಕು.

9) ಆಯಾ ನಿಗಮಗಳ ವಿಚಕ್ಷಣಾ ದಳಗಳು, ಒಬ್ಬ ಗುತ್ತಿಗೆದಾರರು ಕೊರೆದ ಒಟ್ಟು ಬಾವಿಗಳಲ್ಲಿ ಶೇ. 10ನ್ನು ರ‍್ಯಾಂಡಮ್ ಆಗಿ ಪರಿಶೀಲನೆ ನಡೆಸಿದಾಗ ಕೊಳವೆಬಾವಿ ಆಳ ಮತ್ತು ಕೇಸಿಂಗ್ ಪೈಪ್‌ನ ಅಳತೆಯಲ್ಲಿ ವ್ಯತ್ಯಾಸ ಕಂಡುಬಂದಲ್ಲಿ ಪರಿಶೀಲನೆ ನಡೆಸಿದ ಕೊಳವೆ ಬಾವಿಗಳಲ್ಲಿ ಗರಿಷ್ಠ ವ್ಯತ್ಯಾಸ ಬಂದ ಅಳತೆಗಳನ್ನು ಗುತ್ತಿಗೆದಾರರು ಕೊರೆದ ಎಲ್ಲಾ ಬಾವಿಗಳಿಗೆ ಅನ್ವಯಿಸಿ ಹಣ ಕಡಿತ ಮಾಡುವುದು.

10) ಕೊಳವೆಬಾವಿಯನ್ನು ಕೊರೆದ ನಂತರ ನೀರಿನ ಇಳುವರಿ ಪ್ರಮಾಣವನ್ನು ``v-notch" ವಿಧಾನದಿಂದ ನಿಗಮದ ಅಧಿಕಾರಿಗಳು ದೃಢೀಕರಿಸಿ ಬಿಲ್ಲನ್ನು ಸಲ್ಲಿಸಬೇಕು. ಅಂತಹ ಬಿಲ್ಲಿನ ಮೊತ್ತದ ಮೇಲೆ ಶೇ.80 ರಷ್ಟು ಹಣವನ್ನು ಪಾವತಿಸುವುದು.

11) ಕೊರೆದ ಕೊಳವೆಬಾವಿಗಳಿಗೆ ಪಂಪ್‌ಸೆಟ್‌ಗಳನ್ನು ಅಳವಡಿಸುವ ಮುಂಚೆ ಗಣಿ ಮತ್ತು ಭೂವಿಜ್ಞಾನ ಇಲಾಖೆ ಅಥವಾ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆಯಲ್ಲಿ ಕೆಲಸ ನಿರ್ವಹಿಸುತ್ತಿರುವ ಭೂವಿಜ್ಞಾನಿಗಳಿಂದ ಏರ್ ಲೈನ್ ವಿಧಾನದಿಂದ ನೀರಿನ ಇಳುವರಿ ಪರೀಕ್ಷೆ ನಡೆಸಿ ಪ್ರಮಾಣಪತ್ರ ಪಡೆದು ಪಂಪ್‌ಸೆಟ್‌ಗಳನ್ನು ಯಶಸ್ವಿಯಾಗಿ ಅಳವಡಿಸಿದ ನಂತರ ಅಥವಾ ಒಂದು ವೇಳೆ "airline" ವಿಧಾನದಲ್ಲಿ ನೀರಿನ ಅಳತೆ ಮಾಡದಿದ್ದಲ್ಲಿ ಪಂಪ್‌ಸೆಟ್‌ಗಳನ್ನು ಅಳವಡಿಸಿ ವಿದ್ಯುದ್ಧೀಕರಣವಾದ ನಂತರ ಗಣಿ ಮತ್ತು ಭೂವಿಜ್ಞಾನ ಇಲಾಖೆ ಅಥವಾ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆಯಲ್ಲಿ ಕೆಲಸ ನಿರ್ವಹಿಸುತ್ತಿರುವ ಭೂವಿಜ್ಞಾನಿಗಳಿಂದ ಇಳುವರಿ ಪರೀಕ್ಷೆ ಮಾಡಿಸಿ ಪ್ರಮಾಣಪತ್ರ ಸಲ್ಲಿಸಿದ ನಂತರವೇ ಶೇ.10 ರಷ್ಟು ಹಣವನ್ನು ನೀಡತಕ್ಕದ್ದು.

12) ಕೊನೆಯ ಶೇ.10 ರಷ್ಟು ಬಿಲ್ಲಿನ ಮೊತ್ತವನ್ನು ವಿದ್ಯುದ್ಧೀಕರಣಗೊಳಿಸಿದ ದಿನಾಂಕದಿಂದ ಒಂದು ವರ್ಷ ಗ್ಯಾರಂಟಿ ಅವಧಿ ಮುಗಿದ ನಂತರ ಪಾವತಿಸುವುದು ಅಥವಾ ಇಳುವರಿ ಪರೀಕ್ಷೆ ನಡೆಸಿ ಪಂಪ್ ಮೋಟಾರ್

ಯಶಸ್ವಿಯಾಗಿ ಅಳವಡಿಸಿದ ನಂತರ ಅಷ್ಟೇ ಮೊತ್ತಕ್ಕೆ ಬ್ಯಾಂಕ್ ಗ್ಯಾರಂಟಿ ನೀಡಿದಲ್ಲಿ ಗುತ್ತಿಗೆದಾರರಿಗೆ ಹಣ ಪಾವತಿಸುವುದು.

13) ಜಿಲ್ಲಾ ವ್ಯವಸ್ಥಾಪಕರು ಕೊಳವೆಬಾವಿ ಕೊರೆಯಲು ಕಾರ್ಯಾದೇಶ ನೀಡಿದ ದಿನಾಂಕದಿಂದ 30 ದಿನಗಳ ಒಳಗೆ ಕೊರೆಯದೇ ಇದ್ದ ಪಕ್ಷದಲ್ಲಿ, ಒಂದು ವಾರ ತಡವಾದಲ್ಲಿ ಕೊಳವೆಬಾವಿ ಕೊರೆಯಲು ತಗಲುವ ವೆಚ್ಚಕ್ಕೆ ಶೇ.0.5 ರಷ್ಟು ಎರಡು ವಾರಕ್ಕೆ ಶೇ.1.00 ಮೂರು ವಾರಕ್ಕೆ ಶೇ.1.5 ನಾಲ್ಕನೇ ವಾರಕ್ಕೆ ಶೇ.2.00 ರಷ್ಟು ದಂಡವನ್ನು ವಿಧಿಸುವುದು. ಗಡುವಿನ ನಂತರದ 4 ವಾರಗಳು ಕಳೆದರೂ ಕೊಳವೆಬಾವಿಗಳನ್ನು ಕೊರೆಯದೇ ಹೋದಲ್ಲಿ ಇ.ಎಂ.ಡಿ./ಬ್ಯಾಂಕ್ ಗ್ಯಾರಂಟಿಯಲ್ಲಿ ದಂಡದ ಮೊತ್ತವನ್ನು ಮುಟ್ಟುಗೋಲು ಹಾಕಿಕೊಳ್ಳುವುದು.

14) ಗುತ್ತಿಗೆದಾರರಿಗೆ ಕಾರ್ಯಾದೇಶ ನೀಡಿದ ಇಲ್ಲಾ ಕೊಳವೆಬಾವಿಗಳನ್ನು ಯಶಸ್ವಿಯಾಗಿ ಕೊರೆದು ವಿದ್ಯುದ್ದೀಕರಣ ದಿನಾಂಕದಿಂದ ಒಂದು ವರ್ಷ ಗ್ಯಾರಂಟಿ ಅವಧಿ ಮುಗಿದ ನಂತರ ಇ.ಎಂ.ಡಿ. ಮೊತ್ತವನ್ನು ಹಿಂತಿರುಗಿಸುವುದು.

15) ಕಾರ್ಯಾದೇಶ ಪಡೆದ ನಂತರ ಇ.ಎಂ.ಡಿ. ಹಣವನ್ನು ಹಿಂದೆ ಪಡೆಯಲು ಗುತ್ತಿಗೆದಾರರು ಇಚ್ಛಿಸಿದಲ್ಲಿ ಅದಕ್ಕೆ ಸಮಾನ ಮೊತ್ತದ ಬ್ಯಾಂಕ್ ಗ್ಯಾರಂಟಿ ನೀಡಿದಲ್ಲಿ ಇ.ಎಂ.ಡಿ. ಹಿಂದಿರುಗಿಸುವುದು.

16) ಕೊಳವೆಬಾವಿಯ ಕನಿಷ್ಟ, ಇಳುವರಿ ಪ್ರತಿ ಗಂಟೆಗೆ 1000 ಗ್ಯಾಲನ್‌ಗಳಿಗೆ ಗುತ್ತಿಗೆದಾರರು ಗ್ಯಾರಂಟಿ ಕೊಡಬೇಕು. ಒಂದು ವೇಳೆ ಯಾವುದೇ ಹಂತದಲ್ಲಿ ಅಥವಾ ವಿದ್ಯುದ್ದೀಕರಣವಾದ ದಿನಾಂಕದಿಂದ ಒಂದು ವರ್ಷದ ಅವಧಿಯವರೆಗೆ ಕಡಿಮೆಯಾದಲ್ಲಿ ಹೊಸ ಕೊಳವೆಬಾವಿಯನ್ನು ಗುತ್ತಿಗೆದಾರರ ಖರ್ಚಿನಲ್ಲಿ ಉಚಿತವಾಗಿ ಕೊರೆದು ಕೊಡಬೇಕು. ತಪ್ಪಿದಲ್ಲಿ ಗುತ್ತಿಗೆದಾರರಿಗೆ ಪಾವತಿಸಲು ಬಾಕಿಯಿರುವ ಹಣದಲ್ಲಿ ಅಥವಾ ಇ.ಎಂ.ಡಿ./ಬ್ಯಾಂಕ್ ಗ್ಯಾರಂಟಿ ಮೊತ್ತದಲ್ಲಿ ಮುಟ್ಟುಗೋಲು ಹಾಕಿಕೊಂಡು ಇತರೆ ಗುತ್ತಿಗೆದಾರರಿಂದ ಹೊಸದಾಗಿ ಕೊಳವೆಬಾವಿಯನ್ನು ಕೊರೆಯಿಸಿ ಕೊಡುವುದು.

17) ಸಬ್‌ಮರ್ಸಿಬಲ್ ಪಂಪ್‌ಸೆಟ್‌ನ್ನು ಸಮರ್ಪಕವಾಗಿ ಅಳವಡಿಸಲು ಸಾಧ್ಯವಾಗದೇ ಇದ್ದಲ್ಲಿ ಅಂತಹ ಕೊಳವೆಬಾವಿಗಳನ್ನು ಪುನಃ ಕೊರೆಯುವ ಯಂತ್ರದಿಂದ ಗುತ್ತಿಗೆದಾರರ ಸ್ವಂತ ಖರ್ಚಿನಲ್ಲಿ ಫ್ಲಶ್ ಮಾಡಿಸಬೇಕು. ತಪ್ಪಿದ್ದಲ್ಲಿ ಬೇರೆ ಗುತ್ತಿಗೆದಾರರಿಂದ ಮಾಡಿಸಿ ತಗಲುವ ವೆಚ್ಚವನ್ನು ಪಾವತಿಸಲು ಬಾಕಿಯಿರುವ ಮೊತ್ತದಿಂದ ಇ.ಎಂ.ಡಿ./ಬ್ಯಾಂಕ್ ಗ್ಯಾರಂಟಿ ಮೊತ್ತದಿಂದ ಕಡಿತಗೊಳಿಸುವುದು.

18) ಕನಿಷ್ಠ 1000 ಜಿ.ಪಿ.ಹೆಚ್. ನೀರಿಲ್ಲದಿದ್ದರೆ ಯಾವುದೇ ಹಣ ನೀಡಲಾಗುವುದಿಲ್ಲ.

19) ಟೆಂಡರ್‌ದಲ್ಲಿ ಅಂಗೀಕರಿಸಿದ ದರಗಳು 12 ತಿಂಗಳುಗಳ ಅವಧಿಗೆ ಅನ್ವಯಿಸುತ್ತದೆ. ನಂತರದ ಅವಧಿಯನ್ನು ವಿಸ್ತರಿಸುವ ಅಧಿಕಾರವನ್ನು ಟೆಂಡರ್ ಅಂಗೀಕರಿಸುವ ಪ್ರಾಧಿಕಾರವು ಹೊಂದಿರುತ್ತದೆ.

20) ಒಂದು ಜಿಲ್ಲೆಗೆ ಅವಶ್ಯಕತೆ ಇದ್ದಲ್ಲಿ ಒಂದಕ್ಕಿಂತ ಹೆಚ್ಚಿನ ಟೆಂಡರ್‌ದಾರರನ್ನು ಎಲ್–1 ದರದಲ್ಲಿ ಅಂಗೀಕರಿಸುವ ಅಧಿಕಾರ ಟೆಂಡರ್ ಅಂಗೀಕರಿಸುವ ಪ್ರಾಧಿಕಾರಕ್ಕೆ ಇರುತ್ತದೆ.

ಸದರಿ ಯೋಜನೆಯನ್ನು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ (1999) ಹಾಗೂ ಅದರ ಅಡಿ ರೂಪಿಸಿರುವ ನಿಯಮಗಳನ್ವಯ ಅನುಷ್ಠಾನಗೊಳಿಸಲು ಈ ಕೆಳಗಿನ ಸಮಿತಿಗಳನ್ನು ರಚಿಸಲಾಗಿದೆ.

**ಟೆಂಡರ್ ಆಹ್ವಾನಿಸುವ ಪ್ರಾಧಿಕಾರ/ಅಧಿಕಾರಿ**

ಪ್ರಧಾನ ವ್ಯವಸ್ಥಾಪಕರು (ಅಭಿವೃದ್ಧಿ), ಡಾ॥ ಬಿ.ಆರ್. ಅಂಬೇಡ್ಕರ್ ಅಭಿವೃದ್ಧಿ ನಿಗಮ ನಿಯಮಿತ, ಬೆಂಗಳೂರು (ನಾಲ್ಕು ನಿಗಮಗಳ ಪರವಾಗಿ).

**ಟೆಂಡರ್ ಪರಿಶೀಲನಾ ಸಮಿತಿ**

| | | |
|---|---|---|
| 1) | ವ್ಯವಸ್ಥಾಪಕ ನಿರ್ದೇಶಕರು, ಡಾ॥ ಬಿ.ಆರ್. ಅಂಬೇಡ್ಕರ್ ಅಭಿವೃದ್ಧಿ ನಿಗಮ ನಿಯಮಿತ | ಅಧ್ಯಕ್ಷರು |
| 2) | ವ್ಯವಸ್ಥಾಪಕ ನಿರ್ದೇಶಕರು, ಡಿ. ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮ ನಿಯಮಿತ | ಸದಸ್ಯರು |
| 3) | ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಪರಿಶಿಷ್ಟ ವರ್ಗಗಳ ಅಭಿವೃದ್ಧಿ ನಿಗಮ ನಿಯಮಿತ | ಸದಸ್ಯರು |

| | | |
|---|---|---|
| 4) | ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಅಲ್ಪಸಂಖ್ಯಾತರ ಅಭಿವೃದ್ಧಿ ನಿಗಮ ನಿಯಮಿತ | ಸದಸ್ಯರು |
| 5) | ಮುಖ್ಯ ಅಭಿಯಂತರರು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಂಜಿನಿಯರಿಂಗ್ ಇಲಾಖೆ, ಆನಂದರಾವ್ ವೃತ್ತ, ಬೆಂಗಳೂರು | ಸದಸ್ಯರು |
| 6) | ಮುಖ್ಯ ಅಭಿಯಂತರರು, ಕರ್ನಾಟಕ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ, ಬೆಂಗಳೂರು | ಸದಸ್ಯರು |
| 7) | ಪ್ರಧಾನ ವ್ಯವಸ್ಥಾಪಕರು (ಅಭಿವೃದ್ಧಿ), ಡಾ॥ ಬಿ.ಆರ್. ಅಂಬೇಡ್ಕರ್ ಅಭಿವೃದ್ಧಿ ನಿಗಮ ನಿಯಮಿತ | ಸದಸ್ಯ–ಕಾರ್ಯದರ್ಶಿ |

**ಟೆಂಡರ್ ಅಂಗೀಕರಿಸುವ ಪ್ರಾಧಿಕಾರ**

| | | |
|---|---|---|
| 1) | ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿ, ಸಮಾಜ ಕಲ್ಯಾಣ ಇಲಾಖೆ | ಅಧ್ಯಕ್ಷರು |
| 2) | ವ್ಯವಸ್ಥಾಪಕ ನಿರ್ದೇಶಕರು, ಡಿ. ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮ ನಿಯಮಿತ | ಸದಸ್ಯರು |
| 3) | ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಪರಿಶಿಷ್ಟ ವರ್ಗಗಳ ಅಭಿವೃದ್ಧಿ ನಿಗಮ ನಿಯಮಿತ | ಸದಸ್ಯರು |
| 4) | ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಅಲ್ಪಸಂಖ್ಯಾತರ ಅಭಿವೃದ್ಧಿ ನಿಗಮ ನಿಯಮಿತ | ಸದಸ್ಯರು |
| 5) | ಮುಖ್ಯ ಅಭಿಯಂತರರು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಂಜಿನಿಯರಿಂಗ್ ಇಲಾಖೆ, ಆನಂದರಾವ್ ವೃತ್ತ, ಬೆಂಗಳೂರು | ಸದಸ್ಯರು |
| 6) | ಮುಖ್ಯ ಅಭಿಯಂತರರು, ಕರ್ನಾಟಕ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ, ಬೆಂಗಳೂರು | ಸದಸ್ಯರು |
| 7) | ವ್ಯವಸ್ಥಾಪಕ ನಿರ್ದೇಶಕರು, ಡಾ॥ ಬಿ.ಆರ್. ಅಂಬೇಡ್ಕರ್ ಅಭಿವೃದ್ಧಿ ನಿಗಮ ನಿಯಮಿತ | ಸದಸ್ಯ–ಕಾರ್ಯದರ್ಶಿ |

ಅಂತಹ ಟೆಂಡರ್‌ನಲ್ಲಿ ಭಾಗವಹಿಸಲು ಇರಬೇಕಾದ ಅರ್ಹತೆ ಮತ್ತು ಅದಕ್ಕೆ ಸಂಬಂಧಿಸಿದ ದಾಖಲೆಗಳು, ನಿರ್ವಹಿಸಬೇಕಾದ ಕಾಮಗಾರಿಗಳು ಮತ್ತು ಸಂಬಂಧಿಸಿದ ವಿಶಿಷ್ಟತೆಗಳು, ಹಣ ಪಾವತಿ ವಿಧಾನ, ಟೆಂಡರ್ ನಿಬಂಧನೆ ಮತ್ತು ಷರತ್ತುಗಳನ್ನು ವಿವರಿಸುವ ತಾಂತ್ರಿಕ ಬಿಡ್ (technical bid) ಹಾಗೂ ಆರ್ಥಿಕ ಬಿಡ್ (financial bid) ನ್ನು ವ್ಯವಸ್ಥಾಪಕ ನಿರ್ದೇಶಕರು, ಡಾ॥ ಬಿ.ಆರ್. ಅಂಬೇಡ್ಕರ್ ಅಭಿವೃದ್ಧಿ ನಿಗಮ ಇವರು ರೂಪಿಸುವುದು. ಈ ನಿಬಂಧನೆ ಮತ್ತು ಷರತ್ತುಗಳಲ್ಲಿ (ತಾಂತ್ರಿಕ ಬಿಡ್, ಆರ್ಥಿಕ ಬಿಡ್) ಯಾವುದೇ ಬದಲಾವಣೆ ತರಲು "ಟೆಂಡರ್ ಅಹ್ವಾನಿಸುವ ಪ್ರಾಧಿಕಾರ" ಇಚ್ಛಿಸಿದಲ್ಲಿ "ಟೆಂಡರ್ ಅಂಗೀಕರಿಸುವ ಪ್ರಾಧಿಕಾರ"ದ ಅನುಮೋದನೆ ಪಡೆಯಬೇಕಾಗಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಂ. ಬಾಟೆ,**

ಸರ್ಕಾರದ ಅಧೀನ ಕಾರ್ಯದರ್ಶಿ–3,

ಪಿ.ಆರ್.403 ಸಮಾಜ ಕಲ್ಯಾಣ ಇಲಾಖೆ.

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

**ವಿಷಯ :** 'ತುಮಕೂರು ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ' ಎಂಬ ಪುಸ್ತಕದ ಮುದ್ರಣ – ಸರ್ಕಾರದ ಮಂಜೂರಾತಿ.

**ಓದಲಾಗಿದೆ :** ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ಇಲಾಖೆ, ಮೈಸೂರು ರವರ ಪತ್ರಸಂಖ್ಯೆ ಡಿ.ಎ.ಎಂ./ಪ್ರ.ವಿ.ಮೈಸೂರು –2009–10, ದಿನಾಂಕ 31–12–2009.

**ಪ್ರಸ್ತಾವನೆ :**

ಮೇಲೆ ಓದಲಾದ ದಿನಾಂಕ 31–12–2009ರ ಪತ್ರದಲ್ಲಿ ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ ಇವರು ಪ್ರಸ್ತಾವನೆ ಸಲ್ಲಿಸಿ, 'ತುಮಕೂರು ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ' ಎಂಬ ಪುಸ್ತಕವನ್ನು ಮುದ್ರಿಸಲು ಪ್ರಸ್ತಾಪಿಸಿರುತ್ತಾರೆ. 2009–10ನೇ ಆರ್ಥಿಕ ಸಾಲಿನ ಮುಂದುವರೆದ ಯೋಜನಾ ಕಾರ್ಯಕ್ರಮದಡಿ ಲೆಕ್ಕಶೀರ್ಷಿಕೆ 2205–00–

103–0–01 (ಯೋಜನೆ) 059 ಇತರ ಖರ್ಚುಗಳಡಿ ಸಂಶೋಧನಾ ಪ್ರಕಟಣೆಗಳಿಗಾಗಿ ರೂ.20.00 ಲಕ್ಷಗಳನ್ನು ನಿಗದಿಗೊಳಿಸಲಾಗಿದ್ದು, ಇದರಡಿ ಉದ್ದೇಶಿತ ಪುಸ್ತಕವನ್ನು ಮುದ್ರಣ ಮಾಡಲು, ಪಾರದರ್ಶಕ ನಿಯಮಾನುಸಾರ ಟೆಂಡರ್ ಪ್ರಕಟಣೆಯನ್ನು ಕೈಗೊಂಡು ಅತ್ಯಂತ ಕಡಿಮೆ ದರವನ್ನು ಸಲ್ಲಿಸುವ ಮುದ್ರಣಕಾರರಿಂದ ಮುದ್ರಿಸಲು ಕೋರಿರುವರು, ಸದರಿ ಮುದ್ರಣಕ್ಕಾಗಿ ವೆಚ್ಚವಾಗುವ ರೂ.1,26,700–00 ಲಕ್ಷ ಹಣವನ್ನು ಭರಿಸಲು ಕೋರಿರುವರು.

ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ : ಕಸಂವಾಪ್ರ 15 ಕೆಎಂಯು 2010, ಬೆಂಗಳೂರು, ದಿನಾಂಕ 5ನೇ ಫೆಬ್ರವರಿ 2010**

'ತುಮಕೂರು ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ' ಎಂಬ ಕನ್ನಡ ಆವೃತ್ತಿಯ ಒಟ್ಟು 500 ಪುಸ್ತಕಗಳ ಮುದ್ರಣಕ್ಕಾಗಿ ರೂ.1,26,700–00 (ರೂ. ಒಂದು ಲಕ್ಷ ಇಪ್ಪತ್ತಾರು ಸಾವಿರದ ಏಳುನೂರು ಮಾತ್ರ) ಹಣವನ್ನು ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ಇಲಾಖೆಗೆ 2009–10ನೇ ಸಾಲಿನಲ್ಲಿ ಮಂಜೂರು ಮಾಡಿ ಆದೇಶಿಸಿದೆ.

ಈ ಸಂಬಂಧ ಉಂಟಾಗುವ ವೆಚ್ಚವನ್ನು 2009–10ನೇ ಸಾಲಿನ ಆಯವ್ಯಯ ಲೆಕ್ಕಶೀರ್ಷಿಕೆ 2205–00–103–0–01 (ಯೋಜನೆ) 059 ಇತರೆ ಖರ್ಚುಗಳಡಿಯಲ್ಲಿ ಭರಿಸತಕ್ಕದ್ದು.

ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಸಹಮತಿಯನ್ನು ಅನಧಿಕೃತ ಟಿಪ್ಪಣಿ ಸಂಖ್ಯೆ : ಶಿಇ 128 ಐಎಫ್ (ಬಿಎ) 2010 ದಿನಾಂಕ 20–1–2010 ರಲ್ಲಿ ಪಡೆದು ಹಾಗೂ ಇಲಾಖಾ ಕಾರ್ಯದರ್ಶಿಗಳಿಗೆ ಸರ್ಕಾರದ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ 10–7–96 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ಪ್ರದತ್ತವಾದ ಅಧಿಕಾರದ ಪ್ರತ್ಯಾಯೋಜನೆಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಕೆ. ಧರ್ಮರಾಜಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ.
(ಆಡಳಿತ ಕನ್ನಡ)

ಪಿ.ಆರ್.404

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

**ವಿಷಯ :** Hampi Fabled Capital of Vijayanagara Empire (Splendor that was Hampi) – ಪುಸ್ತಕವನ್ನು ಆಂಗ್ಲ ಆವೃತ್ತಿಯಲ್ಲಿ ಮುದ್ರಣ ಮಾಡುವ ಕುರಿತು – ಮಂಜೂರಾತಿ.

**ಓದಲಾಗಿದೆ :** ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ಇಲಾಖೆ, ಮೈಸೂರು ರವರ ಪತ್ರಸಂಖ್ಯೆ ಡಿ.ಎ.ಎಂ./ಪ್ರ.ವಿ.ಮೈಸೂರು–2009–10, ದಿನಾಂಕ 31–12–2009.

**ಪ್ರಸ್ತಾವನೆ :**

ಮೇಲೆ ಓದಲಾದ ದಿನಾಂಕ 31–12–2009ರ ಪತ್ರದಲ್ಲಿ ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ ಇವರು ಪ್ರಸ್ತಾವನೆ ಸಲ್ಲಿಸಿ, Hampi Fabled Capital of Vijayanagara Empire (Splendor that was Hampi) – ಪುಸ್ತಕವನ್ನು ಆಂಗ್ಲ ಆವೃತ್ತಿಯಲ್ಲಿ ಮುದ್ರಣ ಮಾಡುವ ಕುರಿತು ಪ್ರಸ್ತಾಪಿಸಿರುತ್ತಾರೆ. 2009–10 ನೇ ಆರ್ಥಿಕ ಸಾಲಿನ ಮುಂದುವರಿದ ಯೋಜನಾ ಕಾರ್ಯಕ್ರಮದಡಿ ಲೆಕ್ಕಶೀರ್ಷಿಕೆ 2205–00–103–0–01 (ಯೋಜನೆ) 059 ಇತರ ಖರ್ಚುಗಳಡಿ ಸಂಶೋಧನಾ ಪ್ರಕಟಣೆಗಳಿಗಾಗಿ ರೂ.20.00 ಲಕ್ಷಗಳನ್ನು ನಿಗದಿಗೊಳಿಸಲಾಗಿದ್ದು, ಇದರಡಿ ಉದ್ದೇಶಿತ ಪುಸ್ತಕವನ್ನು ಮುದ್ರಣ ಮಾಡಲು, ಪಾರದರ್ಶಕ ನಿಯಮಾನುಸಾರ ಟೆಂಡರ್ ಪ್ರಕಟಣೆಯನ್ನು ಕೈಗೊಂಡು ಅತ್ಯಂತ ಕಡಿಮೆ ದರವನ್ನು ಸಲ್ಲಿಸಿರುವ ಮುದ್ರಣಕಾರರಿಂದ ಕರಾರು ಒಪ್ಪಂದವನ್ನು ಮಾಡಿಕೊಂಡು ಆದೇಶವನ್ನು ನೀಡಲಾಗಿದೆಯೆಂದು ತಿಳಿಸಿರುವರು. ಸದರಿ ಮುದ್ರಣಕ್ಕಾಗಿ ವೆಚ್ಚವಾಗುವ ರೂ.9.38 ಲಕ್ಷ ಹಣವನ್ನು ಭರಿಸಲು ತಾಳೆಪಟ್ಟಿಯೊಂದಿಗೆ ಸಲ್ಲಿಸಿ ಆಡಳಿತಾತ್ಮಕ ಅನುಮೋದನೆ ಕೋರಿರುವರು.

ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ : ಕಸಂವಾಪ್ರ 13 ಕೆಎಂಯು 2010, ಬೆಂಗಳೂರು, ದಿನಾಂಕ 5ನೇ ಫೆಬ್ರವರಿ 2010**

Hampi Fabled Capital of Vijayanagara Empire (Splendor that was Hampi) – ಪುಸ್ತಕವನ್ನು ಆಂಗ್ಲ ಆವೃತ್ತಿಯಲ್ಲಿ ಮುದ್ರಣ ಮಾಡುವ ಕುರಿತು, , ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆಗೆ 2009–10ನೇ ಸಾಲಿನ ಆಯವ್ಯಯದಲ್ಲಿ ರೂ.9.38 ಲಕ್ಷ ಹಣವನ್ನು ಬಿಡುಗಡೆ ಮಾಡಿ ಮಂಜೂರಾತಿ ಆದೇಶ ನೀಡಿದೆ.

ಈ ಸಂಬಂಧ ಉಂಟಾಗುವ ವೆಚ್ಚವನ್ನು 2009–10ನೇ ಸಾಲಿನ ಆಯವ್ಯಯ ಲೆಕ್ಕಶೀರ್ಷಿಕೆ 2205–00–103–0–01 (ಯೋಜನೆ) 059 ಇತರೆ ಖರ್ಚುಗಳಡಿಯಲ್ಲಿ ಭರಿಸತಕ್ಕದ್ದು.

ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಸಹಮತಿಯನ್ನು ಅನಧಿಕೃತ ಟಿಪ್ಪಣಿ ಸಂಖ್ಯೆ : ಶಿಇ 125 ಐಎಫ್ (ಬಿಎ) 2010 ದಿನಾಂಕ 20–1–2010 ರಲ್ಲಿ ಪಡೆದು ಹಾಗೂ ಇಲಾಖಾ ಕಾರ್ಯದರ್ಶಿಗಳಿಗೆ ಸರ್ಕಾರದ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ 10–7–96 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ಪ್ರದತ್ತವಾದ ಅಧಿಕಾರದ ಪ್ರತ್ಯಾಯೋಜನೆಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಕೆ. ಧರ್ಮರಾಜಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಪಿ.ಆರ್.405 ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ.
(ಆಡಳಿತ ಕನ್ನಡ)

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

**ವಿಷಯ :** ಗೋಖಲೆ ಸಾರ್ವಜನಿಕ ವಿಚಾರ ಸಂಸ್ಥೆ, ಸಂಸ್ಥೆಯ ಸಂಸ್ಥಾಪಕರಾದ ಪೂಜ್ಯ ಡಿ.ವಿ. ಗುಂಡಪ್ಪನವರ 125ನೇ ಜನ್ಮದಿನೋತ್ಸವ ಸ್ಮರಣೆಯಲ್ಲಿ ಸಂಸ್ಥೆಯ ಆವರಣದಲ್ಲಿ ನಿರ್ಮಾಣವಾಗುತ್ತಿರುವ ಡಿ.ವಿ.ಜಿ. ಸ್ಮಾರಕ ಭವನ ನಿರ್ಮಾಣವನ್ನು ಪೂರೈಸಲು ರೂ.1.50 ಕೋಟಿಗಳ ಸಹಾಯಧನ ನೀಡುವ ಬಗ್ಗೆ.

**ಓದಲಾಗಿದೆ :** ಕಾರ್ಯದರ್ಶಿ, ಗೋಖಲೆ ಸಾರ್ವಜನಿಕ ವಿಚಾರ ಸಂಸ್ಥೆ ಇವರ ಪತ್ರ ಸಂಖ್ಯೆ 5800/08–09, ದಿನಾಂಕ 16–01–2010.

**ಪ್ರಸ್ತಾವನೆ :**

ಮೇಲೆ ಓದಲಾದ ದಿನಾಂಕ 16–01–2010 ರ ಪತ್ರದಲ್ಲಿ ಕಾರ್ಯದರ್ಶಿ, ಗೋಖಲೆ ಸಾರ್ವಜನಿಕ ವಿಚಾರ ಸಂಸ್ಥೆ ಇವರು ಗೋಖಲೆ ಸಾರ್ವಜನಿಕ ವಿಚಾರ ಸಂಸ್ಥೆಯು ಅನೇಕ ಸಾರ್ವಜನಿಕ ಚಟುವಟಿಕೆಗಳನ್ನು ನಡೆಸಿಕೊಂಡು ಬಂದಿದ್ದು, ಅನೇಕ ಪ್ರಮುಖ ಕಾರ್ಯಕ್ರಮಗಳನ್ನು ಕೈಗೊಂಡಿದೆ. ಆದ್ದರಿಂದ ಈ ಸಂಸ್ಥೆಯ ಸ್ಥಾಪಕರಾದ ಪೂಜ್ಯ ಡಿ.ವಿ. ಗುಂಡಪ್ಪನವರ 125ನೇ ಜನ್ಮ ದಿನೋತ್ಸವ ಅಂಗವಾಗಿ ಸಂಸ್ಥೆಯ ಆವರಣದಲ್ಲಿ ನಿರ್ಮಾಣ ಹಂತದಲ್ಲಿರುವ ಡಿ.ವಿ.ಜಿ. ಸ್ಮಾರಕ ಭವನ ನಿರ್ಮಾಣವನ್ನು ಪೂರೈಸಲು ರೂ.1.50 ಕೋಟಿಗಳನ್ನು 2010–11 ನೇ ಸಾಲಿನ ಆಯವ್ಯಯದಲ್ಲಿ ಅನುಮೋದನೆ ನೀಡಿ ಬಿಡುಗಡೆ ಮಾಡುವಂತೆ ಕೋರಿರುತ್ತಾರೆ. ಹಾಗೂ ಇವರ ಪ್ರಸ್ತಾವನೆಯ ಪತ್ರದ ಮೇಲೆ ಮಾನ್ಯ ಮುಖ್ಯಮಂತ್ರಿಗಳು "2009–10ನೇ ಆಯವ್ಯಯದಲ್ಲಿ 2 ಕಂತುಗಳಲ್ಲಿ ಕೂಡಲೇ 1.50 ಕೋಟಿ ಬಿಡುಗಡೆ ಮಾಡಲು ಆದೇಶಿಸಿರುತ್ತಾರೆ" ಆರ್ಥಿಕ ಇಲಾಖೆ ಮೊದಲನೆಯ ಕಂತಾಗಿ ರೂ.75.00 ಲಕ್ಷ ಬಿಡುಗಡೆ ಮಾಡಲು ಸಹಮತಿಸಿರುತ್ತಾರೆ.

ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಕಸಂವಾಪ್ರ 11 ಸ್ಮಾಪ್ರನಿ 2010, ಬೆಂಗಳೂರು, ದಿನಾಂಕ 4ನೇ ಫೆಬ್ರವರಿ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ, ಗೋಖಲೆ ಸಾರ್ವಜನಿಕ ವಿಚಾರ ಸಂಸ್ಥೆಯ ಸ್ಥಾಪಕರಾದ ಪೂಜ್ಯ ಡಿ.ವಿ. ಗುಂಡಪ್ಪನವರ ಹೆಸರಿನಲ್ಲಿ ಸಂಸ್ಥೆಯ ಆವರಣದಲ್ಲಿ ಸ್ಮಾರಕ ಭವನ ನಿರ್ಮಾಣ ಮಾಡಲು ಮೊದಲನೇ ಕಂತಾಗಿ ರೂ.75.00 ಲಕ್ಷ (ರೂಪಾಯಿ ಎಪ್ಪತ್ತೈದು ಲಕ್ಷಗಳು ಮಾತ್ರ) ಗಳನ್ನು ಈ ಕೆಳಕಂಡ ಷರತ್ತಿಗೊಳಪಟ್ಟು ಕಾರ್ಯದರ್ಶಿ, ಗೋಖಲೆ ಸಾರ್ವಜನಿಕ ವಿಚಾರ ಸಂಸ್ಥೆ ಇವರಿಗೆ ಬಿಡುಗಡೆ ಮಾಡಲು ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಇವರಿಗೆ ಸರ್ಕಾರದ ಮಂಜೂರಾತಿ ನೀಡಿದೆ.

**ಷರತ್ತುಗಳು :**

1. ಮೊದಲನೇ ಕಂತಿನ ಅನುದಾನ ಉಪಯೋಗಿಸಿದ ಬಗ್ಗೆ ಉಪಯೋಗ ಪ್ರಮಾಣಪತ್ರವನ್ನು ಒದಗಿಸುವುದು.
2. ಎರಡನೇ ಕಂತಿನ ಅನುದಾನ ಬಿಡುಗಡೆ ಮಾಡಲು ಸೂಕ್ತ ಪ್ರಸ್ತಾವನೆ ಸಲ್ಲಿಸುವುದು ಅದಕ್ಕೂ ಮುಂಚೆ ಬಿಡುಗಡೆ ಮಾಡಿರುವ ಹಣಕ್ಕೆ ಉಪಯುಕ್ತತಾ ಪತ್ರ ನೀಡುವುದು.

ಈ ಮೊತ್ತವನ್ನು 2009–10ನೇ ಸಾಲಿನ ಆಯವ್ಯಯ ಲೆಕ್ಕಶೀರ್ಷಿಕೆ 2205–00–102–4–31–059 (ಕನ್ನಡ ಮತ್ತು ಸಂಸ್ಕೃತಿಗೆ ಉತ್ಸಾಹ) (ಯೋಜನೆ) ಇದರಡಿ ಒದಗಿಸಿರುವ ರೂ.3000.00 ಲಕ್ಷಗಳಲ್ಲಿ ಬಾಕಿ ಉಳಿದ ರೂ.1031.30 ಲಕ್ಷಗಳಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ದಿನಾಂಕ 03–01–2010 ರ ಟಿಪ್ಪಣಿ ಸಂಖ್ಯೆ : ಆಇ 120 ವೆಚ್ಚ–7 2010 ರಲ್ಲಿ ಆರ್ಥಿಕ ಇಲಾಖೆಯ ಸಹಮತಿಯನ್ನು ಪಡೆದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಕೆ. ಧರ್ಮರಾಜಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ.
(ಆಡಳಿತ ಕನ್ನಡ)

ಪಿ.ಆರ್.406

## ಇಂಧನ ಸಚಿವಾಲಯ

**ವಿಷಯ :** M/s Shriram Leitwind Limited ಇವರಿಗೆ 50.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆ ಹಂಚಿಕೆ ಬಗ್ಗೆ :–

**ಓದಲಾಗಿದೆ :** 1) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ : ಕೆಆರ್ಇಡಿ/08/ಎಸ್ಎಲ್ಎಲ್/2009/923(ಎ) ದಿನಾಂಕ 18/21–2–2009.

2) ದಿನಾಂಕ 23–10–2009ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು M/s Shriram Leitwind Limited ಇವರಿಗೆ ಗದಗ ಮತ್ತು ಚಿಕ್ಕಮಗಳೂರು ಜಿಲ್ಲೆಗಳಲ್ಲಿ ಒಟ್ಟು 50.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಹಂಚಿಕೆ ಸಮಿತಿ ಸಭೆಯ ಮುಂದೆ ಸದರಿ ಪ್ರಸ್ತಾವನೆಯನ್ನು ಮಂಡಿಸಲಾಗಿತ್ತು. M/s Shriram Leitwind Limited ಇವರಿಗೆ 50.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲು ಹಂಚಿಕೆ ಸಮಿತಿಯು ಪರಿಗಣಿಸಿರುತ್ತದೆ. ಆದುದರಿಂದ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರದ ಆದೇಶ ಸಂಖ್ಯೆ : ಇನ್ 87 ಎನ್ಸಿಇ 2009, ಬೆಂಗಳೂರು, ದಿನಾಂಕ 08–02–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ M/s Shriram Leitwind Limited ಇವರಿಗೆ ಗದಗ ಮತ್ತು ಚಿಕ್ಕಮಗಳೂರು ಜಿಲ್ಲೆಗಳಲ್ಲಿ ಒಟ್ಟು 50.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಈ ಕೆಳಗೆ ವಿವರಿಸಿರುವಂತೆ ಈ ಆದೇಶದಲ್ಲಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಿದೆ :–

| Sl. No. | Toposheet No. | Proposed capacity in MW | Near by Villages of the proposed area and district | Geographical area description of the project |
|---|---|---|---|---|
| 1. | 48M/14 | 15 MW | Sudi, Kalkapur, Sankapur, Itagi, Bevianakatti Gadag District | The identified area is a plain terrain, has presence of stream and scattered vegetation. Further, the area has moderate elevation variation varying from 580 to 600 mtrs. The major portion of the area is situated in SE and South of Sudi Village. The area is held in the following Geographical Co-ordinates :<br>**Latitude :** 15$^{0}$40’0”- 15$^{0}$40’0” N<br>**Longitude :** 75$^{0}$50’0”- 75$^{0}$55’0”E<br>**Ridge peaks:** 572, 590, 593, 585, 598, 589, 596, 579 & 586m amsl |
| 2. | 48M/14 | 15 MW | Bandehal, Thondehal Gadag District | It is ground level plain, spreads around Bandehal and Thondehal. It appears to be agricultural land and has scattered plantation and moderate elevation varying from 620 to 640 mtr.The area is held in the following Geographical co-ordinates :<br>**Latitude :** 15$^{0}$30’0”- 13$^{0}$11’16” N<br>**Longitude :** 75$^{0}$51’42”- 75$^{0}$55’56”E<br>**Ridge peaks:** 637, 615, 617, 622, & 625m Amsl |
| 3. | 48O/14 | 10 MW | Narsipura, Karaganagahatta, Kardipura, Mekhanahalli, Sokke, Attimogge, Hosur, Chikkamagalur District | The identified area consists of small independent hillocks including the allotted one. The part of the area is described as dense scrub. It has presence of water bodies, rocky knobs and platation. The entire area is situated on N-E of Mekanahalli. The elevation of the area varying from 760 to 780 mtrs. The area is held in the following Geographical co-ordinates : :<br>**Latitude :** 13$^{0}$42’37”- 13$^{0}$45’0” N<br>**Longitude :** 75$^{0}$55’33”- 76$^{0}$0’0”E<br>**Ridge peaks:** 783, 777, 773 & 758m Amsl |
| 4. | 48O/14 | 10 MW | Lakshmisagar, Miralenahalli, Amruthpur, Basavanahalli, Chikkamagalur District | The proposed area is located on the N-E of Tharikere and is a ground level plain consisting of waterbodies and scattered platation. The elevation of the area varies from 680 to 720 mtrs. The area is held in the following Geographical co-ordinates :<br>**Latitude :** 13$^{0}$42’21”- 13$^{0}$45’0” N<br>**Longitude :** 75$^{0}$49’27”- 75$^{0}$51’40”E<br>**Ridge peaks:** 682, 692, 668 & 683m Amsl |
| Total | | 50 MW | | |

1. ಸದರಿ ಯೋಜನೆಯನ್ನು financial closure ಸಾಧಿಸಿದ 24 ತಿಂಗಳುಗಳ ಒಳಗಾಗಿ ಪ್ರಾರಂಭ ಮಾಡತಕ್ಕದ್ದು
2. ಈ ಆದೇಶ ಹೊರಡಿಸಿದ ದಿನಾಂಕದಿಂದ 45 ದಿನಗಳೊಳಗಾಗಿ ಯೋಜನಾಭಿವೃದ್ಧಿದಾರರು ರೂ. 400 ರ ಛಾಪಾ ಕಾಗದದಲ್ಲಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳುವುದು. ತಪ್ಪಿದಲ್ಲಿ ಈ ಹಂಚಿಕೆ ಆದೇಶ ತಂತಾನೆ ರದ್ದಾಗಿದೆ ಎಂದು ಭಾವಿಸುವುದು.
3. ಹಂಚಿಕೆದಾರರು ಪೂರ್ತಿ ಒಂದು ಪವನ ವರ್ಷಕ್ಕೆ ಕಡಿಮೆ ಇಲ್ಲದಂತೆ 10 ಮೀಟರ್ ಮತ್ತು ಹಬ್ ಹೈಟ್ ಮಟ್ಟದಲ್ಲಿ ಪವನ ವೇಗದ ಅಳತೆಯನ್ನು ಮಾಡಿಕೊಳ್ಳಬೇಕು. ಅಲ್ಲದೇ, ಕಾಲ ಕಾಲಕ್ಕೆ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದಿಂದ ಹೊರಡಿಸತಕ್ಕ ಮಾರ್ಗಸೂಚಿಗಳಿಗನುಗುಣವಾಗಿ ಮೈಕ್ರೋ ಸೈಟಿಂಗ್ ಮಾಡಿರುವ ಅಂಶಗಳನ್ನೊಳಗೊಂಡ ವಿವರವಾದ ಯೋಜನಾ ವರದಿಗಳ 3 ಪ್ರತಿಗಳನ್ನು ತಯಾರಿಸಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಮಂಡಿಸಬೇಕು. ತಾಂತ್ರಿಕ ಅವಶ್ಯಕತೆ ಮತ್ತು ಹೆಚ್ಚಿನ ವಿದ್ಯುತ್ ಉತ್ಪಾದನೆಯನ್ನು ಸೇಫ್ ನಕ್ಷೆ ಮತ್ತು ವಿಂಡ್ ಫಾರ್ಮನ ಲೇಔಟ್‌ನ ಬದಲಾವಣೆಗನುಗುಣವಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ಶಿಫಾರಸ್ಸಿನಂತೆ ಇದೆ ಎಂಬುದನ್ನು ಖಾತರಿ ಪಡಿಸಬೇಕು.
4. ಗಾಳಿ ಚಕ್ರದ ಹಬ್ ಹೈಟಿನಲ್ಲಿ ಪವನ ವೇಗದ ಅಳತೆ ಖಾತರಿ ಪಡಿಸಲು ಕೆಳಗಿನ ಕೋಷ್ಟಕದಲ್ಲಿ ವಿವರಿಸಿರುವಂತೆ ಪ್ರತಿ 5 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಗೆ ಒಂದರಂತೆ ಗಾಳಿ ಕಂಬವನ್ನು (ವಿಂಡ್ ಮಾಸ್ಟ್) ಅಳವಡಿಸಬೇಕು. ಅಳತೆ ವಿವರಗಳನ್ನು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸಲ್ಲಿಸುವುದು.

| ಗಾಳಿ ಶಕ್ತಿ ವಿದ್ಯುತ್ತಿನ ದೂರ ಸಾಮರ್ಥ್ಯ | 5 ಮೆಗಾವ್ಯಾಟ್ ಗಾಳಿ ಯೋಜನೆಯಲ್ಲಿ ಸಾಧಾರಣ ಗಾಳಿ ಶಕ್ತಿ ವಿದ್ಯುತ್ತಿನ ಸಂಖ್ಯೆ | ಹಾಕಬೇಕಾಗಿರುವ ಗಾಳಿ ಕಂಬ (ವಿಂಡ್ ಮಾಸ್ಟ್‌ಗಳ ಸಂಖ್ಯೆ |
|---|---|---|
| ➢ 200 ಕಿ. ವ್ಯಾ. ನಿಂದ 300 ಕಿ. ವ್ಯಾ. | 18 | 1 |
| ➢ 300 ಕಿ. ವ್ಯಾ. ನಿಂದ 500 ಕಿ. ವ್ಯಾ. | 15 | 1 |
| ➢ 500 ಕಿ. ವ್ಯಾ. ನಿಂದ 750 ಕಿ. ವ್ಯಾ. | 12 | 1 |
| ➢ 750 ಕಿ. ವ್ಯಾ. ನಿಂದ 1000 ಕಿ. ವ್ಯಾ. | 8 ರಿಂದ 10 | 1 |

5. ಯೋಜನೆಯ ವಿವಿಧ ಹಂತದ ಚಟುವಟಿಕೆಗಳು ಹಾಗೂ ಯೋಜನೆಗಳಿಂದ ಪ್ರಾರಂಭದ ಹಂತದ ತನಕ ವಿವಿಧ ಮೈಲುಗಲ್ಲುಗಳನ್ನು ತೋರಿಸುವ ಪರ್ಟ್ ನಕ್ಷೆಯನ್ನು ತಯಾರಿಸಿ ಮೇಲುಸ್ತುವಾರಿಗಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸಲ್ಲಿಸಬೇಕು.
6. ಎಲ್ಲೆಲ್ಲಿ ಶಾಸನಬದ್ಧ ಅನುಮೋದನೆ ಅವಶ್ಯಕತೆಯಿದೆಯೋ ಅಂದರೆ ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ/ಕಂದಾಯ/ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆಗಳ ಮತ್ತು ಇತರ ಸಂಬಂಧಿತ ಇಲಾಖೆಗಳಿಂದ ಅನುಮೋದನೆಯನ್ನು ಹಂಚಿಕೆದಾರರು ಪಡೆದುಕೊಳ್ಳತಕ್ಕದ್ದು.
7. ಅಭಿವೃದ್ಧಿದಾರರು ಸಂಬಂಧಿಸಿದ ವಿದ್ಯುತ್ ಸರಬರಾಜು ಕಂಪನಿಯೊಂದಿಗೆ/ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ನೀತಿ ನಿಯಮಗಳಿಗನುಗುಣವಾಗಿ ವೀಲಿಂಗ್ ಮತ್ತು ಬ್ಯಾಂಕಿಂಗ್/ವಿದ್ಯುತ್ ಖರೀದಿ ಒಡಂಬಡಿಕೆ ಮಾಡಿಕೊಳ್ಳಲು ಅನುಮತಿಸಲಾಗಿದೆ.
8. ಕಾಲ ಕಾಲಕ್ಕೆ ಇರುವ ನೀತಿ ನಿಯಮಗಳಿಗೆ ಅನುಗುಣವಾಗಿ ಯಂತ್ರೋಪಕರಣಗಳಿಗೆ ಪ್ರವೇಶ ತೆರಿಗೆಯಿಂದ ವಿನಾಯಿತಿ ನೀಡಲಾಗಿದೆ.
9. ಯೋಜನೆಯನ್ನು ತ್ವರಿತವಾಗಿ ಅನುಷ್ಠಾನ ಮಾಡಲು ಅನುವಾಗುವಂತೆ ರಾಜ್ಯ ಮತ್ತು ಜಿಲ್ಲಾ ಮಟ್ಟದ ಸರ್ಕಾರಿ ಅಧಿಕಾರಿಗಳು ಸಹಕರಿಸುವುದು.
10. ಸದರಿ ಪವನ ವಿದ್ಯುತ್ ಯೋಜನೆಗಾಗಿ ಇಂಧನ ಇಲಾಖೆಯಿಂದ ಜಮೀನನ್ನು ಹಂಚಿಕೆ ಮಾಡಲಾಗುವುದಿಲ್ಲ ಹಾಗೂ ಈ ಹಂಚಿಕೆ ಆದೇಶವು ಪವನ ವಿದ್ಯುತ್ ಯೋಜನೆಯ ಸಾಮರ್ಥ್ಯದ ಹಂಚಿಕೆ ಮಾತ್ರ ಸೀಮಿತವಾಗಿದೆ ಹಾಗೂ ಅಭಿವೃದ್ಧಿದಾರರಿಗೆ ಯೋಜನೆಯ ಜಾಗದಲ್ಲಿಯ ಖನಿಜ ಸಂಪತ್ತು ಹಾಗೂ ಭೂಮಿಯ ಬಗ್ಗೆ ಯಾವುದೇ ಹಕ್ಕು ಇರುವುದಿಲ್ಲ ಎಂಬುದನ್ನು ಮನಗಾಣತಕ್ಕದ್ದು.

11. ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

12. The Company shall note that there is restriction for using 250 KW WTG's

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**(ಎಸ್. ಜಿ. ಸಂಪತ್ ಕುಮಾರ್)**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ

ಪಿ.ಆರ್. 426

## ಇಂಧನ ಸಚಿವಾಲಯ

**ವಿಷಯ :** M/s Sree Kandiamman Industries ಇವರಿಗೆ 43.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆ ಹಂಚಿಕೆ ಬಗ್ಗೆ :–

**ಓದಲಾಗಿದೆ :** 1) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರಗಳ ಸಂಖ್ಯೆ : ಕೆಆರ್‌ಇಡಿ/08/ಎಸ್‌ಕೆಐ/2009/918, ದಿನಾಂಕ 18/21–2–2009 ಮತ್ತು ಸಂಖ್ಯೆ : ಕೆಆರ್‌ಇಡಿ/08/ಎಸ್‌ಕೆಐ/2009/2080, ದಿನಾಂಕ 19–5–2009/2–7–2009.

2) ದಿನಾಂಕ 23–10–2009ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು M/s Sree Kandiamman Industries ಇವರಿಗೆ ಧಾರವಾಡ ಜಿಲ್ಲೆಯಲ್ಲಿ ಒಟ್ಟು 43.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಹಂಚಿಕೆ ಸಮಿತಿ ಸಭೆಯ ಮುಂದೆ ಸದರಿ ಪ್ರಸ್ತಾವನೆಯನ್ನು ಮಂಡಿಸಲಾಗಿತ್ತು. M/s Sree Kandiammam Industries ಇವರಿಗೆ 43.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲು ಹಂಚಿಕೆ ಸಮಿತಿಯು ಪರಿಗಣಿಸಿರುತ್ತದೆ. ಆದುದರಿಂದ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರದ ಆದೇಶ ಸಂಖ್ಯೆ : ಇಎನ್ 88 ಎನ್‌ಸಿಇ 2009, ಬೆಂಗಳೂರು, ದಿನಾಂಕ 08–02–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ M/s Sree Kandiamman Industries ಇವರಿಗೆ ಧಾರವಾಡ ಜಿಲ್ಲೆಯಲ್ಲಿ ಒಟ್ಟು 43.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಈ ಕೆಳಗೆ ವಿವರಿಸಿರುವಂತೆ ಈ ಆದೇಶದಲ್ಲಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಿದೆ :–

| Sl. No. | Toposheet No. | Proposed capacity in MW | Near by Villages of the proposed area and district | Geographical area description of the project |
|---|---|---|---|---|
| 1. | 48M/2 | 10 MW | Tirlapur, Alagavadi, Yamnur Dharwad District. | The proposed area is a ground level plain located on NW-West and SW of Tirlapur. It has presence of Railway track, part of the area is having agricultural activity and it has moderate elevation varying from 600 to 620 mtrs. The area is held in the following Geographical co-ordinates :<br>**Latitude :** 15°30'0"- 15°35'0" N<br>**Longitude :** 75°12'7"- 75°15'0"E<br>**Ridge peaks:** 606, 638, 619 & 626m amsl |

| | | | | |
|---|---|---|---|---|
| 2. | 48M/15 | 30 MW | Hirehanchehal; Thimmapura, Haralapura, Kanginchal, Dharwad District | The proposed area is a ground level plain situated on NE and North of Haralapura. The area has presence of Kanehala and railway track and scattered. Further, it has moderate elevation varying from 640 to 660 mtrs. The area is held in the following Geographical co-ordinates :<br>**Latitude :** $15^{0}$25'0"- $15^{0}$30'0" N<br>**Longitude :** $75^{0}$45'0"- $75^{0}$15'0"E<br>**Ridge peaks:** 641, 645, 634, 648, 644 & 624m amsl |
| 3. | 48M/8 | 3 MW | Sigli, Shyabal, Hesrur, Ulhatti Dharwad District | The proposed area is situated on SE of Sigali village. It has high raised plateau, consistinf of power line, boulders, stony waste and scattered plantation. The elevation of the area varying from 580 to 600 mtrs. The area is held in the following Geographical co-ordinates :<br>**Latitude :** $15^{0}$1'6"- $15^{0}$3'57" N<br>**Longitude :** $75^{0}$28'20"- $75^{0}$30'0"E<br>**Ridge peaks:** 604, 636, 579m amsl |
| | Total | 43 MW | | |

1. ಸದರಿ ಯೋಜನೆಯನ್ನು financial closure ಸಾಧಿಸಿದ 24 ತಿಂಗಳುಗಳ ಒಳಗಾಗಿ ಪ್ರಾರಂಭ ಮಾಡತಕ್ಕದ್ದು
2. ಈ ಆದೇಶ ಹೊರಡಿಸಿದ ದಿನಾಂಕದಿಂದ 45 ದಿನಗಳೊಳಗಾಗಿ ಯೋಜನಾಭಿವೃದ್ಧಿದಾರರು ರೂ. 400 ರ ಛಾಪಾ ಕಾಗದದಲ್ಲಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳುವುದು. ತಪ್ಪಿದಲ್ಲಿ ಈ ಹಂಚಿಕೆ ಆದೇಶ ತಂತಾನೆ ರದ್ದಾಗಿದೆ ಎಂದು ಭಾವಿಸುವುದು.
3. ಹಂಚಿಕೆದಾರರು ಪೂರ್ತಿ ಒಂದು ಪವನ ವರ್ಷಕ್ಕೆ ಕಡಿಮೆ ಇಲ್ಲದಂತೆ 10 ಮೀಟರ್ ಮತ್ತು ಹಬ್ ಹೈಟ್ ಮಟ್ಟದಲ್ಲಿ ಪವನ ವೇಗದ ಅಳತೆಯನ್ನು ಮಾಡಿಕೊಳ್ಳಬೇಕು. ಅಲ್ಲದೇ, ಕಾಲ ಕಾಲಕ್ಕೆ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದಿಂದ ಹೊರಡಿಸತಕ್ಕ ಮಾರ್ಗಸೂಚಿಗಳಿಗನುಗುಣವಾಗಿ ಮೈಕ್ರೋ ಸೈಟಿಂಗ್ ಮಾಡಿರುವ ಅಂಶಗಳನ್ನೊಳಗೊಂಡ ವಿವರವಾದ ಯೋಜನಾ ವರದಿಗಳ 3 ಪ್ರತಿಗಳನ್ನು ತಯಾರಿಸಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಮಂಡಿಸಬೇಕು. ತಾಂತ್ರಿಕ ಅವಶ್ಯಕತೆ ಮತ್ತು ಹೆಚ್ಚಿನ ವಿದ್ಯುತ್ ಉತ್ಪಾದನೆಯನ್ನು ಸೇಫ್ ನಕ್ಷೆ ಮತ್ತು ವಿಂಡ್ ಫಾರ್ಮನ ಲೇಔಟ್‌ನ ಬದಲಾವಣೆಗನುಗುಣವಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ಶಿಫಾರಸ್ಸಿನಂತೆ ಇದೆ ಎಂಬುದನ್ನು ಖಾತರಿ ಪಡಿಸಬೇಕು.
4. ಗಾಳಿ ಚಕ್ರದ ಹಬ್ ಹೈಟಿನಲ್ಲಿ ಪವನ ವೇಗದ ಅಳತೆ ಖಾತರಿ ಪಡಿಸಲು ಕೆಳಗಿನ ಕೋಷ್ಟಕದಲ್ಲಿ ವಿವರಿಸಿರುವಂತೆ ಪ್ರತಿ 5 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಗೆ ಒಂದರಂತೆ ಗಾಳಿ ಕಂಬವನ್ನು (ವಿಂಡ್ ಮಾಸ್ಟ್) ಅಳವಡಿಸಬೇಕು. ಅಳತೆ ವಿವರಗಳನ್ನು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸಲ್ಲಿಸುವುದು.

| ಗಾಳಿ ಶಕ್ತಿ ವಿದ್ಯುತ್ತಿನ ದೂರ ಸಾಮರ್ಥ್ಯ | 5 ಮೆಗಾವ್ಯಾಟ್ ಗಾಳಿ ಯೋಜನೆಯಲ್ಲಿ ಸಾಧಾರಣ ಗಾಳಿ ಶಕ್ತಿ ವಿದ್ಯುತ್ತಿನ ಸಂಖ್ಯೆ | ಹಾಕಬೇಕಾಗಿರುವ ಗಾಳಿ ಕಂಬ (ವಿಂಡ್ ಮಾಸ್ಟ್‌ಗಳ ಸಂಖ್ಯೆ |
|---|---|---|
| ➢ 200 ಕಿ. ವ್ಯಾ. ನಿಂದ 300 ಕಿ. ವ್ಯಾ. | 18 | 1 |
| ➢ 300 ಕಿ. ವ್ಯಾ. ನಿಂದ 500 ಕಿ. ವ್ಯಾ. | 15 | 1 |
| ➢ 500 ಕಿ. ವ್ಯಾ. ನಿಂದ 750 ಕಿ. ವ್ಯಾ. | 12 | 1 |
| ➢ 750 ಕಿ. ವ್ಯಾ. ನಿಂದ 1000 ಕಿ. ವ್ಯಾ. | 8 ರಿಂದ 10 | 1 |

5. ಯೋಜನೆಯ ವಿವಿಧ ಹಂತದ ಚಟುವಟಿಕೆಗಳು ಹಾಗೂ ಯೋಜನೆಗಳಿಂದ ಪ್ರಾರಂಭದ ಹಂತದ ತನಕ ವಿವಿಧ ಮೈಲುಗಲ್ಲುಗಳನ್ನು ತೋರಿಸುವ ಪರ್ಟ್ ನಕ್ಷೆಯನ್ನು ತಯಾರಿಸಿ ಮೇಲುಸ್ತುವಾರಿಗಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸಲ್ಲಿಸಬೇಕು.
6. ಎಲ್ಲೆಲ್ಲಿ ಶಾಸನಬದ್ಧ ಅನುಮೋದನೆ ಅವಶ್ಯಕತೆಯಿದೆಯೋ ಅಂದರೆ ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ/ಕಂದಾಯ/ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆಗಳ ಮತ್ತು ಇತರ ಸಂಬಂಧಿತ ಇಲಾಖೆಗಳಿಂದ ಅನುಮೋದನೆಯನ್ನು ಹಂಚಿಕೆದಾರರು ಪಡೆದುಕೊಳ್ಳತಕ್ಕದ್ದು.
7. ಅಭಿವೃದ್ಧಿದಾರರು ಸಂಬಂಧಿಸಿದ ವಿದ್ಯುತ್ ಸರಬರಾಜು ಕಂಪನಿಯೊಂದಿಗೆ/ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ನೀತಿ ನಿಯಮಗಳಿಗನುಗುಣವಾಗಿ ವೀಲಿಂಗ್ ಮತ್ತು ಬ್ಯಾಂಕಿಂಗ್/ವಿದ್ಯುತ್ ಖರೀದಿ ಒಡಂಬಡಿಕೆ ಮಾಡಿಕೊಳ್ಳಲು ಅನುಮತಿಸಲಾಗಿದೆ.
8. ಕಾಲ ಕಾಲಕ್ಕೆ ಇರುವ ನೀತಿ ನಿಯಮಗಳಿಗೆ ಅನುಗುಣವಾಗಿ ಯಂತ್ರೋಪಕರಣಗಳಿಗೆ ಪ್ರವೇಶ ತೆರಿಗೆಯಿಂದ ವಿನಾಯಿತಿ ನೀಡಲಾಗಿದೆ.
9. ಯೋಜನೆಯನ್ನು ತ್ವರಿತವಾಗಿ ಅನುಷ್ಠಾನ ಮಾಡಲು ಅನುವಾಗುವಂತೆ ರಾಜ್ಯ ಮತ್ತು ಜಿಲ್ಲಾ ಮಟ್ಟದ ಸರ್ಕಾರಿ ಅಧಿಕಾರಿಗಳು ಸಹಕರಿಸುವುದು.
10. ಸದರಿ ಪವನ ವಿದ್ಯುತ್ ಯೋಜನೆಗಾಗಿ ಇಂಧನ ಇಲಾಖೆಯಿಂದ ಜಮೀನನ್ನು ಹಂಚಿಕೆ ಮಾಡಲಾಗುವುದಿಲ್ಲ ಹಾಗೂ ಈ ಹಂಚಿಕೆ ಆದೇಶವು ಪವನ ವಿದ್ಯುತ್ ಯೋಜನೆಯ ಸಾಮರ್ಥ್ಯದ ಹಂಚಿಕೆ ಮಾತ್ರ ಸೀಮಿತವಾಗಿದೆ ಹಾಗೂ ಅಭಿವೃದ್ಧಿದಾರರಿಗೆ ಯೋಜನೆಯ ಜಾಗದಲ್ಲಿಯ ಖನಿಜ ಸಂಪತ್ತು ಹಾಗೂ ಭೂಮಿಯ ಬಗ್ಗೆ ಯಾವುದೇ ಹಕ್ಕು ಇರುವುದಿಲ್ಲ ಎಂಬುದನ್ನು ಮನಗಾಣತಕ್ಕದ್ದು.
11. ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.
12. The Company shall note that there is restriction for using 250 KW WTG's

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**(ಎಸ್. ಜಿ. ಸಂಪತ್ ಕುಮಾರ್)**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ

ಪಿ.ಆರ್. 427

## ಇಂಧನ ಸಚಿವಾಲಯ

**ವಿಷಯ :** M/s Regen Powertech Pvt. Ltd. ಇವರಿಗೆ 27.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆ ಹಂಚಿಕೆ ಬಗ್ಗೆ :–

**ಓದಲಾಗಿದೆ :** 1) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರಗಳ ಸಂಖ್ಯೆ : ಕೆಆರ್ಇಡಿ/08/ಆರ್‌ಪಿಟಿಪಿಎಲ್/2008/506, ದಿನಾಂಕ 25/28–3–2008

2) ದಿನಾಂಕ 23–10–2009ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು M/s Regen Powertech Pvt. Ltd. ಇವರಿಗೆ ಮೈಸೂರು ಜಿಲ್ಲೆಯಲ್ಲಿ 27.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಹಂಚಿಕೆ ಸಮಿತಿ ಸಭೆಯ ಮುಂದೆ ಸದರಿ ಪ್ರಸ್ತಾವನೆಯನ್ನು ಮಂಡಿಸಲಾಗಿತ್ತು. M/s Regen Powertech Pvt. Ltd. ಇವರಿಗೆ 27.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲು ಹಂಚಿಕೆ ಸಮಿತಿಯು ಪರಿಗಣಿಸಿರುತ್ತದೆ. ಆದುದರಿಂದ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರದ ಆದೇಶ ಸಂಖ್ಯೆ : ಇಎನ್ 401 ಎನ್‌ಸಿಇ 2008, ಬೆಂಗಳೂರು, ದಿನಾಂಕ 08–02–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ M/s Regen Powertech Pvt. Ltd. ಇವರಿಗೆ ಮೈಸೂರು ಜಿಲ್ಲೆಯಲ್ಲಿ ಒಟ್ಟು 27.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಈ ಕೆಳಗೆ ವಿವರಿಸಿರುವಂತೆ ಈ ಆದೇಶದಲ್ಲಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಿದೆ :–

| Sl. No. | Toposheet No. | Proposed capacity in MW | Near by Villages of the proposed area and district | Geographical area description of the project |
|---|---|---|---|---|
| 1. | 48P15 & 57 D/3 | 27 MW | Channakal Betta, Niluvadi, Sulingi Betta, Chikka Betta, Doddegauenna & Bettadpur Betta Mysore District | The proposed area of the project consists of Four Independent locations 3 of the 4 location are having mostly NS orientation and are non-contiguous ridges and are also having open scrub and dense scrub features and are mostly in forest areas. The other one location is of high plain with no significant orientation. These 4 locations are identified as Area-A, Area-B, Area-C & Area-D. These locations are surrounded by several villages as named in Column (4). Further, the ridge peaks of these 4 locations along with their geographical co-ordinates are detailed as below :<br>**Area A :**<br>**Latitude :** 12°28’0”- 12°30’0” N<br>**Longitude :** 75°58’36”- 76°0’33”E<br>**Ridge peaks:** 943, 1002m amsl<br>**Area B :**<br>**Latitude :** 12°26’44”- 12°28’23” N<br>**Longitude :** 76°1’11”- 76°2’43”E<br>**Ridge peaks:** 1059m Amsl<br>**Area C :**<br>**Latitude :** 12°27’10”- 12°29’4” N<br>**Longitude :** 76°4’43”- 76°5’59”E<br>**Ride peaks:** 916, 974 & 985m Amsl<br>**Area D :**<br>**Latitude :** 12°26’29”- 12°29’43”N<br>**Longitude :** 76°06’23”- 12°7’25”E<br>**Ridge peaks:** 1056, 1336m Amsl |

1. ಸದರಿ ಯೋಜನೆಯನ್ನು financial closure ಸಾಧಿಸಿದ 24 ತಿಂಗಳುಗಳ ಒಳಗಾಗಿ ಪ್ರಾರಂಭ ಮಾಡತಕ್ಕದ್ದು

2. ಈ ಆದೇಶ ಹೊರಡಿಸಿದ ದಿನಾಂಕದಿಂದ 45 ದಿನಗಳೊಳಗಾಗಿ ಯೋಜನಾಭಿವೃದ್ಧಿದಾರರು ರೂ. 400 ರ ಛಾಪಾ ಕಾಗದದಲ್ಲಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳುವುದು. ತಪ್ಪಿದಲ್ಲಿ ಈ ಹಂಚಿಕೆ ಆದೇಶ ತಂತಾನೆ ರದ್ದಾಗಿದೆ ಎಂದು ಭಾವಿಸುವುದು.

3. ಹಂಚಿಕೆದಾರರು ಪೂರ್ತಿ ಒಂದು ಪವನ ವರ್ಷಕ್ಕೆ ಕಡಿಮೆ ಇಲ್ಲದಂತೆ 10 ಮೀಟರ್ ಮತ್ತು ಹಬ್ ಹೈಟ್ ಮಟ್ಟದಲ್ಲಿ ಪವನ ವೇಗದ ಅಳತೆಯನ್ನು ಮಾಡಿಕೊಳ್ಳಬೇಕು. ಅಲ್ಲದೇ, ಕಾಲ ಕಾಲಕ್ಕೆ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದಿಂದ ಹೊರಡಿಸತಕ್ಕ ಮಾರ್ಗಸೂಚಿಗಳಿಗನುಗುಣವಾಗಿ ಮೈಕ್ರೋ ಸ್ಕೇಟಿಂಗ್ ಮಾಡಿರುವ ಅಂಶಗಳನ್ನೊಳಗೊಂಡ ವಿವರವಾದ ಯೋಜನಾ ವರದಿಗಳ 3 ಪ್ರತಿಗಳನ್ನು ತಯಾರಿಸಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಮಂಡಿಸಬೇಕು. ತಾಂತ್ರಿಕ ಅವಶ್ಯಕತೆ ಮತ್ತು ಹೆಚ್ಚಿನ ವಿದ್ಯುತ್

ಉತ್ಪಾದನೆಯನ್ನು ಸೇಫ್‌ನಕ್ಷೆ ಮತ್ತು ವಿಂಡ್ ಫಾರ್ಮನ ಲೇಔಟ್‌ನ ಬದಲಾವಣೆಗನುಗುಣವಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ಶಿಫಾರಸ್ಸಿನಂತೆ ಇದೆ ಎಂಬುದನ್ನು ಖಾತರಿ ಪಡಿಸಬೇಕು.

4. ಗಾಳಿ ಚಕ್ರದ ಹಬ್ ಹೈಟಿನಲ್ಲಿ ಪವನ ವೇಗದ ಅಳತೆ ಖಾತರಿ ಪಡಿಸಲು ಕೆಳಗಿನ ಕೋಷ್ಟಕದಲ್ಲಿ ವಿವರಿಸಿರುವಂತೆ ಪ್ರತಿ 5 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಗೆ ಒಂದರಂತೆ ಗಾಳಿ ಕಂಬವನ್ನು (ವಿಂಡ್ ಮಾಸ್ಟ್) ಅಳವಡಿಸಬೇಕು. ಅಳತೆ ವಿವರಗಳನ್ನು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸಲ್ಲಿಸುವುದು.

| ಗಾಳಿ ಶಕ್ತಿ ವಿದ್ಯುತ್ತಿನ ದೂರ ಸಾಮರ್ಥ್ಯ | 5 ಮೆಗಾವ್ಯಾಟ್ ಗಾಳಿ ಯೋಜನೆಯಲ್ಲಿ ಸಾಧಾರಣ ಗಾಳಿ ಶಕ್ತಿ ವಿದ್ಯುತ್ತಿನ ಸಂಖ್ಯೆ | ಹಾಕಬೇಕಾಗಿರುವ ಗಾಳಿ ಕಂಬ (ವಿಂಡ್ ಮಾಸ್ಟ್‌ಗಳ ಸಂಖ್ಯೆ |
|---|---|---|
| ➢ 200 ಕಿ. ವ್ಯಾ. ನಿಂದ 300 ಕಿ. ವ್ಯಾ. | 18 | 1 |
| ➢ 300 ಕಿ. ವ್ಯಾ. ನಿಂದ 500 ಕಿ. ವ್ಯಾ. | 15 | 1 |
| ➢ 500 ಕಿ. ವ್ಯಾ. ನಿಂದ 750 ಕಿ. ವ್ಯಾ. | 12 | 1 |
| ➢ 750 ಕಿ. ವ್ಯಾ. ನಿಂದ 1000 ಕಿ. ವ್ಯಾ. | 8 ರಿಂದ 10 | 1 |

5. ಯೋಜನೆಯ ವಿವಿಧ ಹಂತದ ಚಟುವಟಿಕೆಗಳು ಹಾಗೂ ಯೋಜನೆಗಳಿಂದ ಪ್ರಾರಂಭದ ಹಂತದ ತನಕ ವಿವಿಧ ಮೈಲುಗಲ್ಲುಗಳನ್ನು ತೋರಿಸುವ ಪರ್ಟ್ ನಕ್ಷೆಯನ್ನು ತಯಾರಿಸಿ ಮೇಲುಸ್ತುವಾರಿಗಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸಲ್ಲಿಸಬೇಕು.
6. ಎಲ್ಲೆಲ್ಲಿ ಶಾಸನಬದ್ಧ ಅನುಮೋದನೆ ಅವಶ್ಯಕತೆಯಿದೆಯೋ ಅಂದರೆ ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ/ಕಂದಾಯ/ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆಗಳ ಮತ್ತು ಇತರ ಸಂಬಂಧಿತ ಇಲಾಖೆಗಳಿಂದ ಅನುಮೋದನೆಯನ್ನು ಹಂಚಿಕೆದಾರರು ಪಡೆದುಕೊಳ್ಳತಕ್ಕದ್ದು.
7. ಅಭಿವೃದ್ಧಿದಾರರು ಸಂಬಂಧಿಸಿದ ವಿದ್ಯುತ್ ಸರಬರಾಜು ಕಂಪನಿಯೊಂದಿಗೆ/ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ನೀತಿ ನಿಯಮಗಳಿಗನುಗುಣವಾಗಿ ವೀಲಿಂಗ್ ಮತ್ತು ಬ್ಯಾಂಕಿಂಗ್/ವಿದ್ಯುತ್ ಖರೀದಿ ಒಡಂಬಡಿಕೆ ಮಾಡಿಕೊಳ್ಳಲು ಅನುಮತಿಸಲಾಗಿದೆ.
8. ಕಾಲ ಕಾಲಕ್ಕೆ ಇರುವ ನೀತಿ ನಿಯಮಗಳಿಗೆ ಅನುಗುಣವಾಗಿ ಯಂತ್ರೋಪಕರಣಗಳಿಗೆ ಪ್ರವೇಶ ತೆರಿಗೆಯಿಂದ ವಿನಾಯಿತಿ ನೀಡಲಾಗಿದೆ.
9. ಯೋಜನೆಯನ್ನು ತ್ವರಿತವಾಗಿ ಅನುಷ್ಠಾನ ಮಾಡಲು ಅನುವಾಗುವಂತೆ ರಾಜ್ಯ ಮತ್ತು ಜಿಲ್ಲಾ ಮಟ್ಟದ ಸರ್ಕಾರಿ ಅಧಿಕಾರಿಗಳು ಸಹಕರಿಸುವುದು.
10. ಸದರಿ ಪವನ ವಿದ್ಯುತ್ ಯೋಜನೆಗಾಗಿ ಇಂಧನ ಇಲಾಖೆಯಿಂದ ಜಮೀನನ್ನು ಹಂಚಿಕೆ ಮಾಡಲಾಗುವುದಿಲ್ಲ ಹಾಗೂ ಈ ಹಂಚಿಕೆ ಆದೇಶವು ಪವನ ವಿದ್ಯುತ್ ಯೋಜನೆಯ ಸಾಮರ್ಥ್ಯದ ಹಂಚಿಕೆ ಮಾತ್ರ ಸೀಮಿತವಾಗಿದೆ ಹಾಗೂ ಅಭಿವೃದ್ಧಿದಾರರಿಗೆ ಯೋಜನೆಯ ಜಾಗದಲ್ಲಿಯ ಖನಿಜ ಸಂಪತ್ತು ಹಾಗೂ ಭೂಮಿಯ ಬಗ್ಗೆ ಯಾವುದೇ ಹಕ್ಕು ಇರುವುದಿಲ್ಲ ಎಂಬುದನ್ನು ಮನಗಾಣತಕ್ಕದ್ದು.
11. ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**(ಎಸ್. ಜೆ. ಸಂಪತ್ ಕುಮಾರ್)**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ

ಪಿ.ಆರ್. 428

**ಇಂಧನ ಸಚಿವಾಲಯ**

**ವಿಷಯ :** M/s Chauhan Wind Energy ಇವರಿಗೆ 38.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆ ಹಂಚಿಕೆ ಬಗ್ಗೆ :–

**ಓದಲಾಗಿದೆ :** 1) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ : ಕೆಆರ್‌ಇಡಿ/08/ಸಿಡಬ್ಲ್ಯುಇ/2009/914, ದಿನಾಂಕ 18/21–2–2009

2) ದಿನಾಂಕ 23–10–2009ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು M/s Chauhan Wind Energy ಇವರಿಗೆ ಮೈಸೂರು, ಚಾಮರಾಜನಗರ ಮತ್ತು ಚಿತ್ರದುರ್ಗ ಜಿಲ್ಲೆಗಳಲ್ಲಿ ಒಟ್ಟು 38.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಹಂಚಿಕೆ ಸಮಿತಿ ಸಭೆಯ ಮುಂದೆ ಸದರಿ ಪ್ರಸ್ತಾವನೆಯನ್ನು ಮಂಡಿಸಲಾಗಿತ್ತು. M/s Chauhan Wind Energy ಇವರಿಗೆ 38.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲು ಹಂಚಿಕೆ ಸಮಿತಿಯು ಪರಿಗಣಿಸಿರುತ್ತದೆ. ಆದುದರಿಂದ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರದ ಆದೇಶ ಸಂಖ್ಯೆ : ಇಎನ್ 77 ಎನ್‌ಸಿಇ 2009, ಬೆಂಗಳೂರು, ದಿನಾಂಕ 08–02–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ M/s Chauhan Wind Energy ಇವರಿಗೆ ಮೈಸೂರು, ಚಾಮರಾಜನಗರ ಮತ್ತು ಚಿತ್ರದುರ್ಗ ಜಿಲ್ಲೆಗಳಲ್ಲಿ ಒಟ್ಟು 38.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಈ ಕೆಳಗೆ ವಿವರಿಸಿರುವಂತೆ ಈ ಆದೇಶದಲ್ಲಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಿದೆ :–

| Sl. No. | Toposheet No. | Proposed capacity in MW | Near by Villages of the proposed area and district | Geographical area description of the project |
|---|---|---|---|---|
| 1. | 58A/5 | 5 MW | Kalegaudanahundi, Haleyur, Hegguddlu<br>**Mysore District**<br><br>Halsur, Mullurbetta, Hosa Heggudlu, Chamalapura<br>**Mysore District** | The proposed area of the project consists of Area-1 and Area-II<br>**Area I :** is an independent hill hock has N-S orientation and described as fairly dense scrub. The area is held in the following Geographical co-ordinates.<br>**Latitude :** 11°57'29"- 11°58'55" N<br>**Longitude :** 76°25'0"- 76°25'46"E<br>**Ridge peaks:** 792m Amsl<br>**Area II :** it is a mixture of complex and non complex area, consisting of independent non-contiguous hillocks. The area is held in the following Geographical co-ordinates.<br>**Latitude :** 11°57'16"- 12°0'0" N<br>**Longitude :** 76°26'16"- 76°28'7"E<br>**Ridge peaks:** 959 & 738m Amsl |
| 2 | 57H/4 | 10MW | Putanibetta, Hebbalarayabetta, Kumbaranagudda, Talahamanagudda, Chamarajnagar District | The proposed area is a open mixed jungle type consisting of no. of independent, non contiguous hillo and have varied orientations. The entire area comes under Beligiriranganabetta Reserve Forest. The area is covered in the following Geographical co-ordinates :<br>**Latitude :** 12°0'0"- 12°3'6" N<br>**Longitude :** 77°5'0"- 77°9'28"E<br>**Ridge peaks:** 842, 812, 914, 1017, 1002 & 913m Amsl |

| | | | | |
|---|---|---|---|---|
| 3 | 57H/4 | 5MW | Karadibetta, Doddagumpubetta Hebbalarayabetta, Arepalya, Chamarajanagar District | The potential area has predominant orientation in NW-SE direction and is described has fairly dense scrub and appears to be complex. The ridges is called as Doddageumpabetta and is located on the East of Maddur village. The area proposed in the following Geographical co-ordinates :<br>**Latitude :** $12^{0}3'4"$- $12^{0}5'16"$ N<br>**Longitude :** $77^{0}5'33"$- $77^{0}9'4"$E<br>**Ridge peaks:** 732, 853, 890, 781, 896 & 766m Amsl |
| 4 | 57H/4 | 5MW | Mudu Malai, Timmarajapura, Kempanapalys, Bestipura, Buditittu Chamarajnagar District | The identified area is a hilly terrain has predominant NS orientation with varied elevation and described as open scrub and the ridge is called as Madumalai. The place is located on the South of Kollegal town at about 5 Kms. The area is held in the following Geographical co-ordinates :<br>**Latitude :** $12^{0}4'27"$- $12^{0}7'44"$ N<br>**Longitude :** $77^{0}5'57"$- $77^{0}7'28"$E<br>**Ridge peaks:** 909 & 913m Amsl |
| 5 | 57C/5 | 13MW | Hosadurga, Honnaenahalli, Marugandanadibba, Chitradurga District | The potential area is located on North and South of Hosadurga Town. It consists of independent non-contiguous ridges & described as open scrub, further it consists of rocky knobs and eucalyptus plantation and boulders. From the topo map, it appears as forest land. The area is held in the following Geographical co-ordinates.<br>**Latitude :** $13^{0}45'0"$- $13^{0}51'0"$ N<br>**Longitude :** $76^{0}15'0"$- $76^{0}18'4"$E<br>**Ridge peaks:** 1097, 982 & 895m Amsl |
| | Total | 38MW | | |

1. ಸದರಿ ಯೋಜನೆಯನ್ನು financial closure ಸಾಧಿಸಿದ 24 ತಿಂಗಳುಗಳ ಒಳಗಾಗಿ ಪ್ರಾರಂಭ ಮಾಡತಕ್ಕದ್ದು
2. ಈ ಆದೇಶ ಹೊರಡಿಸಿದ ದಿನಾಂಕದಿಂದ 45 ದಿನಗಳೊಳಗಾಗಿ ಯೋಜನಾಭಿವೃದ್ಧಿದಾರರು ರೂ. 400 ರ ಛಾಪಾ ಕಾಗದದಲ್ಲಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳುವುದು. ತಪ್ಪಿದಲ್ಲಿ ಈ ಹಂಚಿಕೆ ಆದೇಶ ತಂತಾನೆ ರದ್ದಾಗಿದೆ ಎಂದು ಭಾವಿಸುವುದು.
3. ಹಂಚಿಕೆದಾರರು ಪೂರ್ತಿ ಒಂದು ಪವನ ವರ್ಷಕ್ಕೆ ಕಡಿಮೆ ಇಲ್ಲದಂತೆ 10 ಮೀಟರ್ ಮತ್ತು ಹಬ್ ಹೈಟ್ ಮಟ್ಟದಲ್ಲಿ ಪವನ ವೇಗದ ಅಳತೆಯನ್ನು ಮಾಡಿಕೊಳ್ಳಬೇಕು. ಅಲ್ಲದೇ, ಕಾಲ ಕಾಲಕ್ಕೆ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದಿಂದ ಹೊರಡಿಸತಕ್ಕ ಮಾರ್ಗಸೂಚಿಗಳಿಗನುಗುಣವಾಗಿ ಮೈಕ್ರೊ ಸೈಟಿಂಗ್ ಮಾಡಿರುವ ಅಂಶಗಳನ್ನೊಳಗೊಂಡ ವಿವರವಾದ ಯೋಜನಾ ವರದಿಗಳ 3 ಪ್ರತಿಗಳನ್ನು ತಯಾರಿಸಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಮಂಡಿಸಬೇಕು. ತಾಂತ್ರಿಕ ಅವಶ್ಯಕತೆ ಮತ್ತು ಹೆಚ್ಚಿನ ವಿದ್ಯುತ್ ಉತ್ಪಾದನೆಯನ್ನು ಸೇಫ್ ನಕ್ಷೆ ಮತ್ತು ವಿಂಡ್ ಫಾರ್ಮನ ಲೇಔಟ್‌ನ ಬದಲಾವಣೆಗನುಗುಣವಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ಶಿಫಾರಸ್ಸಿನಂತೆ ಇದೆ ಎಂಬುದನ್ನು ಖಾತರಿ ಪಡಿಸಬೇಕು.

4. ಗಾಳಿ ಚಕ್ರದ ಹಬ್ ಹೈಟಿನಲ್ಲಿ ಪವನ ವೇಗದ ಅಳತೆ ಖಾತರಿ ಪಡಿಸಲು ಕೆಳಗಿನ ಕೋಷ್ಟಕದಲ್ಲಿ ವಿವರಿಸಿರುವಂತೆ ಪ್ರತಿ 5 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಗೆ ಒಂದರಂತೆ ಗಾಳಿ ಕಂಬವನ್ನು (ವಿಂಡ್ ಮಾಸ್ಟ್) ಅಳವಡಿಸಬೇಕು. ಅಳತೆ ವಿವರಗಳನ್ನು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸಲ್ಲಿಸುವುದು.

| ಗಾಳಿ ಶಕ್ತಿ ವಿದ್ಯುತ್ತಿನ ದೂರ ಸಾಮರ್ಥ್ಯ | 5 ಮೆಗಾವ್ಯಾಟ್ ಗಾಳಿ ಯೋಜನೆಯಲ್ಲಿ ಸಾಧಾರಣ ಗಾಳಿ ಶಕ್ತಿ ವಿದ್ಯುತ್ತಿನ ಸಂಖ್ಯೆ | ಹಾಕಬೇಕಾಗಿರುವ ಗಾಳಿ ಕಂಬ (ವಿಂಡ್ ಮಾಸ್ಟ್‌ಗಳ ಸಂಖ್ಯೆ |
|---|---|---|
| ➢ 200 ಕಿ. ವ್ಯಾ. ನಿಂದ 300 ಕಿ. ವ್ಯಾ. | 18 | 1 |
| ➢ 300 ಕಿ. ವ್ಯಾ. ನಿಂದ 500 ಕಿ. ವ್ಯಾ. | 15 | 1 |
| ➢ 500 ಕಿ. ವ್ಯಾ. ನಿಂದ 750 ಕಿ. ವ್ಯಾ. | 12 | 1 |
| ➢ 750 ಕಿ. ವ್ಯಾ. ನಿಂದ 1000 ಕಿ. ವ್ಯಾ. | 8 ರಿಂದ 10 | 1 |

5. ಯೋಜನೆಯ ವಿವಿಧ ಹಂತದ ಚಟುವಟಿಕೆಗಳು ಹಾಗೂ ಯೋಜನೆಗಳಿಂದ ಪ್ರಾರಂಭದ ಹಂತದ ತನಕ ವಿವಿಧ ಮೈಲುಗಲ್ಲುಗಳನ್ನು ತೋರಿಸುವ ಪರ್ಟ್ ನಕ್ಷೆಯನ್ನು ತಯಾರಿಸಿ ಮೇಲುಸ್ತುವಾರಿಗಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸಲ್ಲಿಸಬೇಕು.
6. ಎಲ್ಲೆಲ್ಲಿ ಶಾಸನಬದ್ಧ ಅನುಮೋದನೆ ಅವಶ್ಯಕತೆಯಿದೆಯೋ ಅಂದರೆ ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ/ಕಂದಾಯ/ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆಗಳ ಮತ್ತು ಇತರ ಸಂಬಂಧಿತ ಇಲಾಖೆಗಳಿಂದ ಅನುಮೋದನೆಯನ್ನು ಹಂಚಿಕೆದಾರರು ಪಡೆದುಕೊಳ್ಳತಕ್ಕದ್ದು.
7. ಆಭಿವೃದ್ಧಿದಾರರು ಸಂಬಂಧಿಸಿದ ವಿದ್ಯುತ್ ಸರಬರಾಜು ಕಂಪನಿಯೊಂದಿಗೆ/ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ನೀತಿ ನಿಯಮಗಳಿಗನುಗುಣವಾಗಿ ವೀಲಿಂಗ್ ಮತ್ತು ಬ್ಯಾಂಕಿಂಗ್/ವಿದ್ಯುತ್ ಖರೀದಿ ಒಡಂಬಡಿಕೆ ಮಾಡಿಕೊಳ್ಳಲು ಅನುಮತಿಸಲಾಗಿದೆ.
8. ಕಾಲ ಕಾಲಕ್ಕೆ ಇರುವ ನೀತಿ ನಿಯಮಗಳಿಗೆ ಅನುಗುಣವಾಗಿ ಯಂತ್ರೋಪಕರಣಗಳಿಗೆ ಪ್ರವೇಶ ತೆರಿಗೆಯಿಂದ ವಿನಾಯಿತಿ ನೀಡಲಾಗಿದೆ.
9. ಯೋಜನೆಯನ್ನು ತ್ವರಿತವಾಗಿ ಅನುಷ್ಠಾನ ಮಾಡಲು ಅನುವಾಗುವಂತೆ ರಾಜ್ಯ ಮತ್ತು ಜಿಲ್ಲಾ ಮಟ್ಟದ ಸರ್ಕಾರಿ ಅಧಿಕಾರಿಗಳು ಸಹಕರಿಸುವುದು.
10. ಸದರಿ ಪವನ ವಿದ್ಯುತ್ ಯೋಜನೆಗಾಗಿ ಇಂಧನ ಇಲಾಖೆಯಿಂದ ಜಮೀನನ್ನು ಹಂಚಿಕೆ ಮಾಡಲಾಗುವುದಿಲ್ಲ ಹಾಗೂ ಈ ಹಂಚಿಕೆ ಆದೇಶವು ಪವನ ವಿದ್ಯುತ್ ಯೋಜನೆಯ ಸಾಮರ್ಥ್ಯದ ಹಂಚಿಕೆ ಮಾತ್ರ ಸೀಮಿತವಾಗಿದೆ ಹಾಗೂ ಅಭಿವೃದ್ಧಿದಾರರಿಗೆ ಯೋಜನೆಯ ಜಾಗದಲ್ಲಿಯ ಖನಿಜ ಸಂಪತ್ತು ಹಾಗೂ ಭೂಮಿಯ ಬಗ್ಗೆ ಯಾವುದೇ ಹಕ್ಕು ಇರುವುದಿಲ್ಲ ಎಂಬುದನ್ನು ಮನಗಾಣತಕ್ಕದ್ದು.
11. ಸದರಿ ಆದೇಶವನ್ನು ರದ್ದು ಪಡಿದುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**(ಎಸ್. ಜೆ. ಸಂಪತ್ ಕುಮಾರ್)**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 429 ಇಂಧನ ಇಲಾಖೆ

**ಇಂಧನ ಸಚಿವಾಲಯ**

**ವಿಷಯ :** ಕರ್ನಾಟಕ ವಿದ್ಯುತ್ ನಿಯಂತ್ರಣ ಆಯೋಗಕ್ಕೆ 2010–11ರ ಹಣಕಾಸು ವರ್ಷದಲ್ಲಿ ನಾಲ್ಕನೇ ಕಂತಿನ ಸಹಾಯಾನುದಾನ ಬಿಡುಗಡೆ ಕುರಿತು.

**ಓದಲಾಗಿದೆ :** 1) ಸರ್ಕಾರಿ ಆದೇಶ ಸಂಖ್ಯೆ : ಇಎನ್ 39 ಪಿಎಸ್‌ಆರ್ 2009, ದಿನಾಂಕ 08–05–2009
2) ಸರ್ಕಾರಿ ಆದೇಶ ಸಂಖ್ಯೆ : ಇಎನ್ 39 ಪಿಎಸ್‌ಆರ್ 2009, ದಿನಾಂಕ 31–08–2009
3) ಸರ್ಕಾರಿ ಆದೇಶ ಸಂಖ್ಯೆ : ಇಎನ್ 39 ಪಿಎಸ್‌ಆರ್ 2009, ದಿನಾಂಕ 29–12–2009

**ಪ್ರಸ್ತಾವನೆ :**

1. 2009–10ನೇ ಸಾಲಿನ ಆಯವ್ಯಯ ಸವಿವರ ವೆಚ್ಚದ ಅಂದಾಜುಗಳು (ಸಂಪುಟ–7) ರಲ್ಲಿ ಕರ್ನಾಟಕ ವಿದ್ಯುತ್ ನಿಯಂತ್ರಣ ಆಯೋಗಕ್ಕೆ ಸಹಾಯಾನುದಾನ ರೂಪದಲ್ಲಿ ರೂ. 190.00 ಲಕ್ಷಗಳ ಅವಕಾಶವನ್ನು ಕಲ್ಪಿಸಲಾಗಿದೆ.

ಸದರಿ ಸಹಾಯಾನುದಾನವನ್ನು 4 ಕಂತುಗಳಲ್ಲಿ ಕರ್ನಾಟಕ ವಿದ್ಯುತ್ ನಿಯಂತ್ರಣ ಆಯೋಗಕ್ಕೆ ಬಿಡುಗಡೆ ಮಾಡಲು ಉದ್ದೇಶಿಸಲಾಗಿರುತ್ತದೆ.

2. ಮೇಲೆ ಓದಲಾದ ಕ್ರಮಾಂಕ–1ರ ಸರ್ಕಾರಿ ಆದೇಶದಲ್ಲಿ ಕರ್ನಾಟಕ ವಿದ್ಯುತ್ ನಿಯಂತ್ರಣ ಆಯೋಗಕ್ಕೆ 2009–10ರ ಮೊದಲನೇ ತ್ರೈಮಾಸಿಕ ಅವಧಿಗೆ ಸಹಾಯನುದಾನ 48 ಲಕ್ಷ ರೂ. ಗಳನ್ನು ಬಿಡುಗಡೆ ಮಾಡಲಾಗಿದೆ.
3. ಮೇಲೆ ಓದಲಾದ ಕ್ರಮಾಂಕ–2ರ ಸರ್ಕಾರಿ ಆದೇಶದಲ್ಲಿ ಕರ್ನಾಟಕ ವಿದ್ಯುತ್ ನಿಯಂತ್ರಣಕ್ಕೆ ಆಯೋಗಕ್ಕೆ 2009–10ರ ಎರಡನೇ ತ್ರೈಮಾಸಿಕ ಅವಧಿಗೆ ಸಹಾಯಾನುದಾನ 45,63,252/– ಲಕ್ಷ ರೂ.ಗಳನ್ನು ಬಿಡುಗಡೆ ಮಾಡಲಾಗಿದೆ.
4. ಮೇಲೆ ಓದಲಾದ ಕ್ರಮಾಂಕ–3ರ ಸರ್ಕಾರಿ ಆದೇಶದಲ್ಲಿ ಕರ್ನಾಟಕ ವಿದ್ಯುತ್ ನಿಯಂತ್ರಣಕ್ಕೆ ಆಯೋಗಕ್ಕೆ 2009–10ರ ಮೂರನೇ ತ್ರೈಮಾಸಿಕ ಅವಧಿಗೆ ಸಹಾಯಾನುದಾನ 48 ಲಕ್ಷ ರೂ.ಗಳನ್ನು ಬಿಡುಗಡೆ ಮಾಡಲಾಗಿದೆ.
5. ಕರ್ನಾಟಕ ವಿದ್ಯುತ್ ನಿಯಂತ್ರಣ ಆಯೋಗದ ಸಿಬ್ಬಂದಿ ಮತ್ತು ಸಾಮಾನ್ಯ ವೆಚ್ಚ ಸಲುವಾಗಿ 2009–10ನೇ ಸಾಲಿಗೆ ನಾಲ್ಕನೇ ತ್ರೈಮಾಸಿಕ ಅವಧಿಗೆ ಸಹಾಯಾನುದಾನ ರೂ. 46,00,000/–ನ್ನು ಕರ್ನಾಟಕ ವಿದ್ಯುತ್ ನಿಯಂತ್ರಣಕ್ಕೆ ಆಯೋಗಕ್ಕೆ ಬಿಡುಗಡೆ ಮಾಡುವ ಬಗ್ಗೆ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಇಎನ್ 39 ಪಿಎಸ್ಆರ್ 2009, ಬೆಂಗಳೂರು, ದಿನಾಂಕ 08–02–2010**

2009–10ನೇ ಹಣಕಾಸು ವರ್ಷದ ನಾಲ್ಕನೇ ತ್ರೈಮಾಸಿಕ ಅವಧಿಗೆ "2801–80–101–1–07 (Grant-in-aid) (Non Plan) ರಲ್ಲಿ ಸಹಾಯಾನುದಾನ" ಲೆಕ್ಕ ಶೀರ್ಷಿಕೆಯಡಿ ಸಿಬ್ಬಂದಿ ಮತ್ತು ಸಾಮಾನ್ಯ ವೆಚ್ಚ ಸಲುವಾಗಿ ರೂ. 46,00,000/– (ನಲವತ್ತಾರು ಲಕ್ಷ ರೂಪಾಯಿಗಳು ಮಾತ್ರ) ನ್ನು ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗಕ್ಕೆ ಬಿಡುಗಡೆ ಮಾಡಿದೆ.

ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗವು ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ, ಇಂಧನ ಇಲಾಖೆಯ ಇವರ ಮೇಲು ರುಜುವನ್ನು "Payees Receipt" ನಲ್ಲಿ ಪಡೆದು ಹಣವನ್ನು ಪಡೆಯತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 21 ಟಿಎಫ್‌ಪಿ 2006, ದಿನಾಂಕ 02–09–2006 ಮತ್ತು ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ 16–05–2008ರಲ್ಲಿ ಸರ್ಕಾರದ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಆರ್ಥಿಕ ಅಧಿಕಾರದನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**(ಎಸ್. ಜೆ. ಸಂಪತ್ ಕುಮಾರ್)**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ

ಪಿ.ಆರ್. 430

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಶ್ರೀ ಡಿ.ಬಿ. ನಾಯಕ್, ಕೆ.ಎ.ಎಸ್. (ಸೂಪರ್ ಟೈಂ ಸ್ಕೇಲ್) ಅಧಿಕಾರಿ ಹಿಂದಿನ ಆಯುಕ್ತರು, ಬೆಳಗಾಂ ನಗರಾಭಿವೃದ್ಧಿ ಪ್ರಾಧಿಕಾರ, ಹಾಲಿ ಅಪರ ಆಯುಕ್ತರು, ಪ್ರಾದೇಶಿಕ ಆಯುಕ್ತರ ಕಛೇರಿ, ಗುಲ್ಬರ್ಗಾ ಇವರ ವಿರುದ್ಧ ಇಲಾಖಾ ವಿಚಾರಣೆ–ಮಂಡನಾಧಿಕಾರಿಯನ್ನು ಬದಲಾಯಿಸಿ ನೇಮಕ ಮಾಡಲು ಪರಿಷ್ಕೃತ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ :** 1) ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 113/ಕೆಇಪಿ 2007, ದಿನಾಂಕ : 8–12–09.
2) ಆಯುಕ್ತರು, ಬೆಳಗಾವಿ ನಗರಾಭಿವೃದ್ಧಿ ಪ್ರಾಧಿಕಾರರವರ ಪತ್ರ ಸಂ: ಬೆನಪ್ರಾ/ಸಿಬ್ಬಂದಿ/ಇಲಾಖಾ ವಿಚಾರಣೆ/2009–10, 3620, ದಿನಾಂಕ : 23–12–2009.

**ಪ್ರಸ್ತಾವನೆ :**

ಶ್ರೀ ಡಿ.ಬಿ. ನಾಯಕ್, ಕೆ.ಎ.ಎಸ್. (ಸೂಪರ್ ಟೈಂ ಸ್ಕೇಲ್) ಅಧಿಕಾರಿ ರವರು, ಬೆಳಗಾಂ ನಗರಾಭಿವೃದ್ಧಿ ಪ್ರಾಧಿಕಾರದ ಆಯುಕ್ತರಾಗಿ ಕಾರ್ಯನಿರ್ವಹಿಸುತ್ತಿದ್ದಾಗ ಜೇಷ್ಠತೆಯನ್ನು ಅನುಸರಿಸದೇ ನಿರಾಕ್ಷೇಪಣಾ ಪತ್ರವನ್ನು ನೀಡಿರುವ, ನಿವೇಶನ ಹಂಚಿಕೆದಾರರಿಗೆ ಖರೀದಿ ಪತ್ರ ನೀಡುವಲ್ಲಿ ವಿಳಂಬ ಮಾಡಿರುವ, ನಗರ ಯೋಜನಾ ಸದಸ್ಯರ ತಾಂತ್ರಿಕ ಅಭಿಪ್ರಾಯ ಧಿಕ್ಕರಿಸಿ ಉಪ ವಿಭಜನೆ ಪ್ರಕರಣಗಳನ್ನು ತಿರಸ್ಕರಿಸಿರುವ ಕಟ್ಟಡ ಮುಕ್ತಾಯ ಪ್ರಮಾಣ ಪತ್ರ ನೀಡುವ ಸಂಕಲನ ನಿರ್ವಹಿಸದೇ ಪ್ರಕರಣಗಳನ್ನು ಇತ್ಯರ್ಥಪಡಿಸಿ ವಿಳಂಬ ಎಸಗಿರುವ, ಬಿನ್ ಶೇತ್ಕಿ ಆದೇಶ ನಿರ್ಬಂಧನೆ ಉಲ್ಲಂಘಿಸಿ ತುಂಡತುಂಡಾಗಿ ಏಕ ನಿವೇಶನಕ್ಕೆ ಅನುಮೋದನೆ ನೀಡಿರುವ ಇತ್ಯಾದಿ ಆರೋಪಗಳ ಕುರಿತು ಎಸಗಿರುವ ಕರ್ತವ್ಯ ಲೋಪ ಹಾಗೂ ದುರ್ನಡತೆಗೆ ಸಂಬಂಧ ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ದಿನಾಂಕ : 8–12–09 ರ ಸರ್ಕಾರಿ ಆದೇಶದಲ್ಲಿ ಇವರ ವಿರುದ್ಧದ

